# ನಗೆಯ ನೆಲೆ

ಪ್ರೊ|| ಎಸ್. ಕೆ. ರಾಮಚಂದ್ರರಾವ್



ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು

1

# ನಗೆಯ ನೆಲೆ

ಪ್ರೊ॥ ಎಸ್. ಕೆ. ರಾಮಚಂದ್ರರಾವ್

ಪ್ರಸಾರಾಂಗ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

NAGEYA NELE by Prof. S. K. Ramachandra Rao, Published by the Bangalore University Bangalore. Pp. 52+viii



ಪ್ರಥಮ ಮುದ್ರಣ 1969
ದ್ವಿತೀಯ ಮುದ್ರಣ 1977
ತೃತೀಯ ಮುದ್ರಣ 1989

ಪ್ರಕಾಶಕರು :
ಕೆ. ವಿ. ನಾರಾಯಣ
ನಿರ್ದೇಶಕರು
ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು 560 056

ಬೆಲೆ : 1-00 ರೂ

ಮುದ್ರಣ :
ನಿರ್ದೇಶಕರು,
ಬೆಂಗಳೂರು ವಿಶ್ವವಿದ್ಯಾಲಯ ಮುದ್ರಣಾಲಯ,
ಬೆಂಗಳೂರು-560 056

# ಮುನ್ನುಡಿ

ಬೋಧನಾಂಗ, ಸಂಶೋಧನಾಂಗ, ಆಡಳಿತಾಂಗ, ಪ್ರಸಾರಾಂಗ ಇವು ವಿಶ್ವವಿದ್ಯಾಲಯದ ನಾಲ್ಕು ಆಧಾರ ಸ್ತಂಭಗಳು. ವಿಶ್ವವಿದ್ಯಾಲಯಗಳು ಕೇವಲ ಬೋಧನೆ ಮತ್ತು ಸಂಶೋಧನಾ ತಿಳಿವಳಿಕೆಯ ಕೇಂದ್ರಗಳಾದರೆ ಸಾಲದು. ಅವು ತನ್ನ ಪರಿಸರದ ಸುತ್ತಲಿನ ಜನತೆಯ ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಪ್ರಕ್ರಿಯೆಗಳಲ್ಲಿ ಪಾಲ್ಗೊಳ್ಳುವುದು ಅತ್ಯವಶ್ಯಕ. ವಿಶ್ವವಿದ್ಯಾಲಯಂದ ವ್ಯಾಸಂಗ ಮತ್ತು ಸಂಶೋಧನೆಯ ಜ್ಞಾನವನ್ನು ತನ್ನ ಸುತ್ತಮುತ್ತಲಿನ ಜನತೆಯ ಅರಿವಿನಲ್ಲಿ ಹಂಚುವ ಹೊಣೆಯನ್ನು ಹೊತ್ತು ವಿಶ್ವವಿದ್ಯಾಲಯಗಳು ಜ್ಞಾನ ಪ್ರಸಾರದ ಕೇಂದ್ರಗಳಾಗಿ ಮುನ್ನಡೆಯಬೇಕು.

ಈ ದಿಸೆಯಲ್ಲಿ ವಿಶ್ವವಿದ್ಯಾಲಯದ ಪ್ರಸಾರಾಂಗವು ಜ್ಞಾನದ ಪ್ರಸಾರವನ್ನು ಜನತೆಗೆ ನೀಡುತ್ತಾ ವಿಶಿಷ್ಟ ಪಾತ್ರವನ್ನು ವಹಿಸಿದೆ. ಪ್ರಸಾರಾಂಗ ಕಳೆದ ಹಲವಾರು ವರ್ಷಗಳಿಂದ ಈ ಜ್ಞಾನದ ಶ್ರೀಮಂತಿಕೆಯನ್ನು ಜನತೆಗೆ ಬಿತ್ತರಿಸಲು ವಿವಿಧ ಉಪನ್ಯಾಸಗಳ ರೂಪದಲ್ಲಿ ತನ್ನ ವೇದಿಕೆಯನ್ನು ನಿರ್ಮಾಣ ಮಾಡಿಕೊಂಡಿದೆ. ನಗರದ ನಾನಾ ಸಂಘ ಸಂಸ್ಥೆಗಳಲ್ಲಿ, ಕಾರ್ಖಾನೆ-ಕಾರ್ಮಿಕ ಕೂಟಗಳಲ್ಲಿ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ ವಿವಿಧ ಬಗೆಯ ಪ್ರಚಾರೋಪನ್ಯಾಸಗಳನ್ನು ಹಿಂದಿ ನಿಂದಲೂ ಏರ್ಪಡಿಸುತ್ತಾ ಬಂದಿದೆ. ಈಗಾಗಲೇ

ನಡೆಸಿ, ಅನಂತರ ಅವುಗಳನ್ನು ಪುಸ್ತಕ ರೂಪದಲ್ಲಿ ಕೂಡ ಪ್ರಸಾರಾಂಗ ಪ್ರಕಟಿಸಿದೆ.

ಅತ್ಯಧಿಕ ಸಂಖ್ಯೆಯಲ್ಲಿ ನಮ್ಮ ಜನತೆಯು ಕೈಸೇರಲೆಂದು ಈ ಕಿರುಹೊತ್ತಿಗೆಗಳನ್ನು ಸುಲಭ ಬೆಲೆಯಲ್ಲಿ ಪ್ರಕಟಿಸಲಾಗಿದೆ. ಈ ಕಿರುಹೊತ್ತಿಗೆಗಳಿಗೆ ಜನಸಾಮಾನ್ಯರ ಮನದಲ್ಲಿ ಅಪಾರವಾದ ಬೇಡಿಕೆ ಇರುವುದನ್ನು ಮನಗಾಣಲಾಗಿದೆ. ಈ ಹಿನ್ನೆಲೆಯಲ್ಲಿ ಪ್ರಸಾರಾಂಗವು ಈಗಾಗಲೇ ಇಂತಹ ವಿವಿಧ ವಿಷಯಗಳ ನ್ನೊಳಗೊಂಡ ಸುಮಾರು 70ಕ್ಕೂ ಹೆಚ್ಚು ಕಿರು ಹೊತ್ತಿಗೆಗಳನ್ನು ಪ್ರಕಟಿಸಿರುವುದು ಹೆಮ್ಮೆಯ ಸಂಗತಿ ಯಾಗಿದೆ.

ಪ್ರಸ್ತುತ ಕೃತಿ, ನಗೆಯ ನೆಲೆ ನಮ್ಮ ಪ್ರಚಾರೋಪನ್ಯಾಸ ಮಾಲೆಯಲ್ಲಿ ತೃತೀಯ ಮುದ್ರಣ ವಾಗಿದೆ. ಇದರಿಂದಲೇ ಇದರ ಜನಪ್ರಿಯತೆ ನಮಗೆಲ್ಲಾ ತಿಳಿಯುತ್ತದೆ. ತೃತೀಯ ಮುದ್ರಣಕ್ಕೆ ಒಪ್ಪಿಗೆ ನೀಡಿ ನಮ್ಮೊಡನೆ ಸಹಕರಿಸಿದ ಲೇಖಕರಾದ ಪ್ರೊ. ಎಸ್. ಕೆ. ರಾಮಚಂದ್ರರಾವ್, ಅವರಿಗೆ ನನ್ನ ಧನ್ಯವಾದಗಳು.

ಡಾ॥ ಡಿ. ಎಂ. ನಂಜುಂಡಪ್ಪ
ಕುಲಪತಿ
ಬೆಂಗಳೂರು ವಿಶ್ವವಿದ್ಯಾಲಯ

## ಅರಿಕೆ

ಬೆಂಗಳೂರು ವಿಶ್ವವಿದ್ಯಾಲಯದ ಅಧಿಕಾರಿಗಳು ಪ್ರಚಾರೋಪನ್ಯಾಸ ಮಾಲೆಯಲ್ಲಿ ಈ ಉಪನ್ಯಾಸವನ್ನು ಜಾಲಹಳ್ಳಿಯ ಭಾರತ್ ಎಲೆಕ್ಟ್ರಾನಿಕ್ಸ್ ಉದ್ಯಮದಲ್ಲಿ ಏರ್ಪಡಿಸಿದರು; ಉಪನ್ಯಾಸಮಾಲೆಯ ಅವತರಣಿಕೆಯಲ್ಲಿಯೇ ನನ್ನ ಸೇವೆಯನ್ನು ಪಡೆದುಕೊಂಡು ನನ್ನನ್ನು ಸನ್ಮಾನಿಸಿದರು. ಇದಕ್ಕಾಗಿಯೂ, ನನ್ನ ಭಾಷಣವನ್ನು ಬರೆದುಕೊಡುವಂತೆ ಕೇಳಿ ಈಗ ಅದನ್ನು ಮುದ್ರಿಸಿರುವುದಕ್ಕಾಗಿಯೂ ವಿಶ್ವವಿದ್ಯಾಲಯದಪ್ರಚಾರೋಪನ್ಯಾಸ ಸಮಿತಿಯ ಅಧಿಕಾರಿವರ್ಗದವರಿಗೆ, ಅದರಲ್ಲಿಯೂ ಆ ದಿನದ ಅಧ್ಯಕ್ಷತೆ ವಹಿಸಿದ್ದ ಡಾ॥ ರಂ. ಶ್ರೀ.ಮುಗಳಿಯವರಿಗೆ ನಾನು ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಈ ಪುಸ್ತಕದ ಪುನರ್ಮುದ್ರಣವಾಗಬೇಕಾದಾಗ ಅಲ್ಲಲ್ಲಿ ಕೆಲವು ವಾಕ್ಯಗಳನ್ನು ಸೇರಿಸಿದ್ದೇನೆ; ವಸ್ತುವನ್ನು ಕೊಂಚ ಹಿಗ್ಗಿಸಿದ್ದೇನೆ. ಇದಕ್ಕೆ ಸಮ್ಮತಿಸಿದ ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗದ ಅಧಿಕಾರಿವರ್ಗಕ್ಕೆ ಋಣಿಯಾಗಿದ್ದೇನೆ.

**ಎಸ್. ಕೆ. ರಾಮಚಂದ್ರರಾವ್**

ಜುಲೈ 5, 1974

## ಪರಿವಿಡಿ

# ನಗೆಯ ನೆಲೆ

## ಸಮಸ್ಯೆಗಳು

ನಗುವುದನ್ನು ಎಲ್ಲರೂ ಬಲ್ಲರು ; ನಗುವುದು ಎಲ್ಲರಿಗೂ ಬೇಕಾದುದೇ. ನಗುವುದನ್ನು ಯಾರೂ ಯಾರಿಗೂ ಕಲಿಸಬೇಕಾದುದಿಲ್ಲ, ನಗಬೇಕೆಂಬ ಸೂಚನೆಯ ಅಗತ್ಯವೂ ಇರುವುದಿಲ್ಲ. ಆದರೆ ನಗೆಯನ್ನು ಕುರಿತು ಜಿಜ್ಞಾಸೆ ಯಾರು ಮಾಡುತ್ತಾರೆ? ನಗೆಯ ಬಗ್ಗೆ ದೊಡ್ಡದೊಂದು ವ್ಯಾಖ್ಯಾನವನ್ನು ಮಾಡ ತೊಡಗಿದರೆ ಅದು ನಗೆಪಾಟಲಾಗುವುದಿಲ್ಲವೆ ? ಯಾರಾ ದರೂ ಹಾಸ್ಯದ ಚಟಾಕಿಯನ್ನು ಹಾರಿಸಿದರೆ ಅದರ ಸಂದರ್ಭವನ್ನಾಗಲೀ ಸ್ವಾರಸ್ಯವನ್ನಾಗಲೀ ವಿವರಿಸು ತ್ತಾರೆಯೆ ? ಹಾಗೆ ವಿವರಿಸಿದಾಗ ಅದರಲ್ಲಿನ ಹಾಸ್ಯ ಉಳಿಯುತ್ತದೆಯೇ ?

ಆದರೆ ನಗೆಯ ನೆಲೆಯನ್ನು ಅರಿತುಕೊಳ್ಳುವ ಕುತೂಹಲ ಆಲಂಕಾರಿಕರಲ್ಲಿ, ಮನೋವಿಜ್ಞಾನಿಗಳಲ್ಲಿ ಆಗಾಗ ಕಂಡುಬರುತ್ತದೆ. ನಗೆಯ ಬಗ್ಗೆ ಗಂಭೀರವಾದ ವಿಶ್ಲೇಷಣೆ, ವಿಮರ್ಶೆ, ಅಧ್ಯಯನಗಳನ್ನು ನಡೆಸಿದ್ದಾರೆ ಈ ಜನ. ಅವರೆಲ್ಲ ಹಾಸ್ಯ-ಪ್ರಿಯರು, ರಸಿಕರು ಎನ್ನುವ ಹಾಗಿಲ್ಲ. ಬಾಳುವೆಯಲ್ಲಿ ಹಾಸ್ಯಪ್ರವೃತ್ತಿ ಯನ್ನು ಅಷ್ಟಾಗಿ ಬೆಳಸಿಕೊಳ್ಳದವರೇ ಇವರಲ್ಲಿ ಬಹು ಮಂದಿ! ನಗದವರೂ, ನಗಿಸದವರೂ ನಗೆಯಲ್ಲಿ ಆಸಕ್ತಿ ಯನ್ನು ತಳೆಯುವುದು ಸಹಜವೆ ?

ನಗೆ ಸ್ವಾರಸ್ಯವಾದುದು, ಕುತೂಹಲಕಾರಿಯಾದುದು ಎನ್ನುವುದೇನೋ ನಿಜ. ಉಳಿದ ಯಾವ ಪ್ರಾಣಿಯಲ್ಲಿಯೂ ಕಾಣಬರದ ನಗೆ ಮನುಷ್ಯನಲ್ಲಿ ಮಾತ್ರ ಕಂಡುಬರುವುದು ಸೋಜಿಗವಲ್ಲವೇ ? ನಗೆಗೆ ವಯಸ್ಸಿನ ಭೇದವಿಲ್ಲ, ದೇಶದ ಭೇದವಿಲ್ಲ, ಯುಗದ ಭೇದವಿಲ್ಲ, ಗಂಡಸು–ಹೆಂಗಸೆನ್ನುವ ಭೇದವಿಲ್ಲ. ಸಣ್ಣವರು, ದೊಡ್ಡವರು, ಗಂಡಸರು, ಹೆಂಗಸರು, ಬಡವರು, ಭಾಗ್ಯವಂತರು, ದಡ್ಡರು, ಜಾಣರು ಎಲ್ಲರೂ ನಗುತ್ತಾರೆ. ಇದರ ಗುಟ್ಟೇನು ? ಆರೋಗ್ಯವಾಗಿರುವ ಮಕ್ಕಳು ಸಹಜವಾಗಿ ಗಹಗಹಿಸಿ ನಗುತ್ತಾರೆ; ರೋಗಿಗಳಾದವರು ನಗುವುದು ಕಡಮೆ. ಇದೇಕೆ ?

ಅಷ್ಟು ಮಾತ್ರವಲ್ಲ. ಸಂಸ್ಕೃತಿಯ ಜಾಲದಲ್ಲಿ ಆಳವಾಗಿ ಸಿಕ್ಕವರು ಗಟ್ಟಿಯಾಗಿ ನಗುವುದು ತಪ್ಪೆಂದು ಬಗೆಯುತ್ತಾರೆ. ಮಕ್ಕಳಿಗೆ ಬುದ್ಧಿ ಹೇಳುವಾಗ ನಾವು "ನಗುವಾಗ ಕೇಕೆಹಾಕಬಾರದು" ಎಂದು ಹೇಳುವುದಿಲ್ಲವೇ ? ಪಕ್ಕೆ ಹಿಡಿದುಕೊಂಡು, ತೂಗಾಡಿ, ತಡೆಯಲಾರದೆ, ನಗುವವರಿದ್ದಾರೆ. ಹೊಟ್ಟೆ ಬಿರಿಯುವುದೋ ಎಂದು ಸಂಶಯಪಡುವಂತೆ ನಗಾಡುವವರಿದ್ದಾರೆ. ಇವರನ್ನು ಅಸಂಸ್ಕೃತರು, ಶಿಷ್ಟರಲ್ಲದವರು, ಪ್ರಾಕೃತಜನ ಎಂದುಬಿಡುತ್ತೇವಷ್ಟೇ? ಸುಸಂಸ್ಕೃತನಾದ, ಸಭ್ಯನಾದ, ಶಿಷ್ಟನೆನಿಸಿದ ಮನುಷ್ಯನದು ಕಿರುನಗೆ, ಮುಗುಳುನಗೆ, ನಸುನಗೆ, ಮೆಲ್‌ನಗೆ; ಅದರಲ್ಲಿ ಶಬ್ದ ಕೇಳಿಸದು. ಅಮರಕೋಶಕ್ಕೆ "ನಾಚಿರಾಜೀಯ"ವೆನ್ನುವ ಹಳೆಯ ಕನ್ನಡ ವ್ಯಾಖ್ಯೆಯೊಂದಿದೆ; ಅದರಲ್ಲಿ ನಗೆಯ ವಿಚಾರವಾಗಿ "ನಗೆ ಕಿರಿದಾದೊಡೆ ಸ್ಮಿತ; ಆ ನಗೆ ಹವಣಿತ್ತಾ

ದೊಡೆ ವಿಹಸಿತ" ಎಂದು ಬರೆದಿದ್ದಾರೆ. ಈ ಭೇದವನ್ನು ಸಂಸ್ಕೃತಿ ಹಿಗ್ಗಿಸಿದೆ. ಇದರ ರಹಸ್ಯವೇನು ?

ಸಂಸ್ಕೃತಿಗೂ ನಗೆಗೂ ಸಂಬಂಧವಿದೆಯೆಂದು ಒಪ್ಪಿಕೊಂಡರೂ ಮುಖ್ಯವಾಗಿ ನಗೆ ದೈಹಿಕವ್ಯಾಪಾರವಲ್ಲವೆ? ಶರೀರದಲ್ಲಿ ಸೌಖ್ಯವಿರದಾಗ ನಗೆ ಸಹಜವಾಗಿ ಹೊರ ಬರುವುದಿಲ್ಲ. ಮನಸ್ಸಿನಲ್ಲಿ ಕಳವಳವಿದ್ದಾಗ, ದಂಗುಡವಿದ್ದಾಗ ನಗೆ ಹೇಗೆ ಬಂದೀತು? ಬುದ್ಧಿ ಸಾಕಷ್ಟು ಬೆಳೆಯದಿದ್ದರೂ ನಗೆ ಕಡಮೆಯೇ. ನಗುವಾಗ ಮನಸ್ಸಿಗೆ ಮಾತ್ರ ಹರ್ಷವಲ್ಲ, ದೇಹಕ್ಕೂ ಉಲ್ಲಾಸ. "ನಕ್ಕು ಆರೋಗ್ಯವನ್ನು ಗಳಿಸು" ಎನ್ನುವ ಗಾದೆ ಇಂಗ್ಲೀಷಿನಲ್ಲಿದೆಯಲ್ಲವೆ ? ಎಂದರೆ ದೇಹಕ್ಕೂ ನಗೆಗೂ ಇರುವ ನಂಟೇನು ? 'ಚಾತುರಾಸ್ಯ ನಿಘಂಟು' ಹೇಳುವ "ನಗೆಯೊಳ್ ಆದ ಧ್ವನಿ", ಎಂದರೆ ಗಹಗಹ, ಶಾರೀರಕವಲ್ಲವೆ? 'ನಗೆವಡಿ'ಯು ಮಾನಸಿಕವಾದರೂ, 'ನಗೆಬೆಳ್ಪು' ಮುಖದಲ್ಲಿ ಕಾಣಿಸುತ್ತದೆ; 'ಪೆರ್ನಗೆ'ಯ ಕೇಕೆ ಕಿವಿಗೆ ಕೇಳಿಸುತ್ತದೆ. ಸಂದರ್ಭವು ಹಾಸ್ಯಾಸ್ಪದವಾಗಿದ್ದಾಗ ಅದರ ಅರಿವು ಮನಸ್ಸಿನಲ್ಲಿ ಮೂಡಿ, ಧ್ವನಿಯಲ್ಲಿಯೂ, ಮುಖಭಂಗಿಯಲ್ಲಿಯೂ ಹೊರ ಹೊಮ್ಮುತ್ತದೆಯಷ್ಟೆ. ಈ ಮಾನಸಿಕ – ವಾಚಿಕ – ದೈಹಿಕ ವ್ಯಾಪಾರಗಳ ಹಿನ್ನೆಲೆಯಲ್ಲಿರುವ ಏಕಸೂತ್ರವೇನು ?

ಹಳೆಯ ಕಾಲದ ಅರಸರ ಓಲಗದಲ್ಲಿ "ನಗಿಸುವಾತ' ನದು ಹಿರಿಯ ಪಾತ್ರವೇ. "ವೈಹಾಸಿಕ", "ಕೇಳೀಕಾರ". "ವಾಸಂತಿಕ", "ವಿದೂಷಕ", ಇವರೆಲ್ಲ ನಗಿಸುವವರೇ. ನಗೆಯೇ ಅವರ ಉದ್ಯೋಗ; ನಗೆಯಿಂದಲೇ ಅವರ

ಬೆಲೆ. ಯಾವ ಕಾಲದಲ್ಲಿಯೂ ಸಹೃದಯರು ಗೋಷ್ಠಿಯಲ್ಲಿ ನೆರೆದಾಗ ಅವರ "ಸುಖಸಂಕಥಾವಿನೋದ"ದಲ್ಲಿ ನಗಿಸುವಾತನಿಗೇ ಪ್ರಮುಖಪಟ್ಟ. ಸಿಡುಕುಮೋರೆಯ ಅರಸಿಕ ಎಷ್ಟು ಪಂಡಿತನಾದರೇನು, ಎಷ್ಟು ಶ್ರೀಮಂತನಾದರೇನು ? ಅವನ ಬಳಿ ಯಾರು ಸೇರುತ್ತಾರೆ ? ನಕ್ಕು ನಗಿಸುವ ಮನುಷ್ಯನಾದರೆ ಎಲ್ಲರಿಗೂ ಬೇಕಾದವನು. ಜೀವನವು ಗಂಭೀರವಾದ ವ್ಯಾಪಾರವೆಂದು ಒಪ್ಪುವವರೂ ನಗಲು ಹಿಂಜರಿಯುವುದಿಲ್ಲ; ಅಳುಕುವುದಿಲ್ಲ. ಜೀವನದಲ್ಲಿ ನಗೆ ಮುಖ್ಯವಾದುದು, ಅಗತ್ಯವಾದುದು ಎಂದು ನಂಬುತ್ತಾರೆ. ಬದುಕಿನ ಗಾಂಭೀರ್ಯಕ್ಕೂ ನಗೆಗೂ ಇರುವ ಸಂಬಂಧವೇನು ?

ಬೇಸರವನ್ನು ಕಳೆಯಲು ನಗೆಯನ್ನು ಬಳಸುವುದು ಎಲ್ಲರಿಗೂ ತಿಳಿದ ವಿಚಾರವಷ್ಟೆ. ಮನಸ್ಸಿಲ್ಲದಿದ್ದರೂ ನಿರ್ಬಂಧದಿಂದ ಕೆಲಸವನ್ನು ಮಾಡಿ ದೇಹ ದಣಿದಾಗ, ಮನಸ್ಸು ಮುದುಡಿಕೊಂಡಾಗ ಆಟವಾಡುತ್ತೇವೆ. ಸ್ನೇಹಿತರೊಂದಿಗೆ ನಗಾಡುತ್ತೇವೆ, ಹಾಸ್ಯದ ಪುಸ್ತಕವನ್ನು ಹಿಡಿದುಕೊಳ್ಳುತ್ತೇವೆ. ಆಗ ಬೇಸರ ಹರಿದು, ದಣಿವು ಆರುತ್ತದೆ; ಮನಸ್ಸು ಮತ್ತೆ ಮೊದಲಿನಂತೆ ಹಸಿರಾಗುತ್ತದೆ, ದೇಹ ಹಗುರಾಗುತ್ತದೆ, ಮುಂದಿನ ಕೆಲಸಕ್ಕೆ ಉತ್ಸಾಹವನ್ನು ತರುತ್ತದೆ. ಬೇಸರಕ್ಕೂ ನಗೆಗೂ ಇರುವ ವಿರೋಧದ ತಾತ್ಪರ್ಯವೇನು ?

ನಗೆಯನ್ನು ಕುರಿತು ಅಧ್ಯಯನಮಾಡುವಾಗ ಇವೇ ಮೊದಲಾದ ಸಮಸ್ಯೆಗಳು ಏಳುತ್ತವೆ. ಈ ಸಮಸ್ಯೆಗಳನ್ನು ಪರಿಹರಿಸಲೆಂದೇ ಮನೋವಿಜ್ಞಾನಿಗಳು ನಗೆಯ ರಚನೆ, ಪ್ರವೃತ್ತಿ, ಪ್ರಯೋಜನಗಳನ್ನು ಕುರಿತು

ಆಳವಾಗಿ ಅಭ್ಯಾಸ ಮಾಡಿದ್ದಾರೆ; ಕೆಲವೊಮ್ಮೆ ಪ್ರಯೋಗಗಳನ್ನೂ ನಡೆಸಿದ್ದಾರೆ. ಇವೆಲ್ಲದರ ಫಲವಾಗಿ ಹಲವಾರು ಸ್ವಾರಸ್ಯವಾದ ವಿವರಗಳು ಹೊರಬಂದಿವೆ, ನಗೆಯ ನೆಲೆ ಸುಮಾರಾಗಿ ಸ್ಪಷ್ಟವಾಗಿದೆ. ದೇಹವಿಜ್ಞಾನ ಮನೋವಿಜ್ಞಾನಗಳು ಮಾತ್ರವಲ್ಲದೆ ಸಮಾಜಶಾಸ್ತ್ರವೂ ಸಂಸ್ಕೃತಿಗಳ ಅಧ್ಯಯನವೂ ಈ ವಿಚಾರವಾಗಿ ವಿವರಗಳನ್ನು ಸಂಗ್ರಹಿಸಿವೆ. ಇಷ್ಟಾದರೂ ನಗೆಯ ತಾತ್ಪರ್ಯ ಸ್ಫುಟವಾಗಿದೆ ಎನ್ನುವ ಹಾಗಿಲ್ಲ. ವಿಜ್ಞಾನ ವೇನೋ ಸಿದ್ಧಾಂತದ ಕಡೆ ಕೈಬೀಸಿದೆಯೆಂದಷ್ಟು ಹೇಳಬಹುದು.

### ವಿಚಾರಸರಣಿ

ನಗೆಯ ಬಗ್ಗೆ ನಮ್ಮ ದೇಶದ ಆಲಂಕಾರಿಕರೂ ಪಾಶ್ಚಾತ್ಯ ದಾರ್ಶನಿಕರೂ ಚರ್ಚೆ ನಡೆಸಿದ್ದಾರೆ. ನಮ್ಮ ಆಲಂಕಾರಿಕರು ಹಾಸ್ಯವನ್ನು ಕಾವ್ಯದ, ನಾಟಕದ ರಸಗಳಲ್ಲಿ ಒಂದು ಎಂದು ಬಗೆದು ಅದರ ಚೌಕಟ್ಟಿನಲ್ಲಿಯೇ ಜಿಜ್ಞಾಸೆ ನಡೆಸಿದರು. ಪ್ರಸ್ತುತ ಉಪನ್ಯಾಸದ ಉದ್ದೇಶ ಇದಲ್ಲವಾದುದರಿಂದ ಅವರ ಅಭಿಪ್ರಾಯಗಳ ಪ್ರಸ್ತಾಪ ಬೇಡ. ಪಾಶ್ಚಾತ್ಯ ದಾರ್ಶನಿಕರು ಬದುಕಿನ ಒಂದು ವಿವರ ಹಾಸ್ಯ ಎಂದೇ ಬಗೆದು ತಮ್ಮ ಅಧ್ಯಯನವನ್ನಾರಂಭಿಸಿದರು. ಗ್ರೀಕರಲ್ಲಿ ಪ್ಲೇಟೋ ಮತ್ತು ಅರಿಸ್ಟಾಟಲ್ (ಕ್ರಿ. ಪೂ. ೩೮೪–೩೨೨) ಹಾಸ್ಯವನ್ನು ನಾಟಕದ ಚೌಕಟ್ಟಿನಲ್ಲಿಯೇ ಕಂಡರು ಎನ್ನುವುದು ನಿಜ; ಅವರ ಅಧ್ಯಯನಕ್ಕೆ ಸ್ಫೂರ್ತಿ ಪ್ರಹಸನವೇ. ಹೆರವರ ದುರದೃಷ್ಟವನ್ನು ಕಂಡು ನಮ್ಮ ಅದೃಷ್ಟ ಸುಖವೆನಿಸಿದಾಗ ನಗುತ್ತೇವೆ; ನವೆಯಾದಾಗ ತುರಿಸಿಕೊಂಡರೆ ಹೇಗೆ

ಸಮಾಧಾನವೋ ಹಾಗೆಯೇ ನಗೆ ಎಂದು ಪ್ಲೇಟೋ ಹೇಳಿದುದನ್ನೇ ಅರಿಸ್ಟಾಟಲ್ ಅನುಮೋದಿಸಿ ಹಾಸ್ಯದಲ್ಲಿ ಅವಹೇಳನವೂ ಸೇರಿದೆ; ಕುರೂಪ–ವಿಕಾರಗಳು ಅಳು ವನ್ನು ತರದಾಗ ನಗುತ್ತೇವೆ ಎಂದು ಹೇಳಿದ. ಹಾಸ್ಯ ದಿಂದ ಪ್ರಯೋಜನವಿದೆಯೆಂದು ಹೇಳಿ, ಅದನ್ನು ದುರುಪಯೋಗಪಡಿಸಿಕೊಳ್ಳುವುದು ಸಾಧ್ಯವೆಂದೂ, ಆದರೆ ಅದನ್ನು ಬಿಗಿಹಿಡಿಯಬೇಕೆಂದೂ ವಾದಿಸಿದ.

ಈ ವಾದವನ್ನೇ ರೋಮನ್ ದಾರ್ಶನಿಕರಾದ ಸಿಸೆರೋ ಮತ್ತು ಕ್ವಿನ್‌ಟಿಲಿಯನ್ ಎತ್ತಿ ಹಿಡಿದು ಪ್ರತೀಕ್ಷಾಭಂಗವೇ ಹಾಸ್ಯದ ಸ್ವಾರಸ್ಯವೆಂದೂ, ಆಡಿದ ಮಾತನ್ನು ವಿಪರೀತಾರ್ಥದಲ್ಲಿ ತಿರುಗಿಸುವುದು ಹಾಸ್ಯದ ಉಗಮವೆಂದೂ ಹೇಳಿದರು. ಗ್ರೀಕರ, ರೋಮನರ ಪ್ರಕಾರ ಹಾಸ್ಯ ಕೇವಲ ಶಾಬ್ದಿಕವಾದುದು; ಅದರಲ್ಲಿ ಮಾನಸಿಕ ವ್ಯಾಪಾರಕ್ಕೆ ಅಷ್ಟಾಗಿ ಕೆಲಸವಿಲ್ಲ. ಅವರ ನಗೆ ನಾಟಕಗಳಲ್ಲಿ ಮಾತಿನ ಹಾಸ್ಯವೇ ಮುಖ್ಯವಾಗಿದ್ದ ತಷ್ಟೆ.

ನಗೆಯ ವಿಚಾರವಾಗಿ ಮನಸ್ಸಿನ ಪಾತ್ರವನ್ನು ನಿರೂಪಿಸಿದವರಲ್ಲಿ ಮೊಟ್ಟ ಮೊದಲನೆಯವನು ಥಾಮಸ್ ಹಾಬ್ಸ್ (೧೫೮೮-೧೬೭೯). ಮಾನವ ಸ್ವಭಾವದ ಬಗ್ಗೆ ಅವನು ಪ್ರಕಟಿಸಿದ ವಿವೇಚನೆಯಲ್ಲಿ "ನಾವೇ ಮೊದಲು ದುರವಸ್ಥೆಯಲ್ಲಿದ್ದು ಅಥವಾ ಬೇರೆಯವರು ಕಷ್ಟದ ಪರಿಸ್ಥಿತಿಯಲ್ಲಿರುವುದನ್ನು ನೋಡಿ, ಅನಂತರ ನಮ್ಮ ಸ್ಥಿತಿ ಒಳ್ಳೆಯದಿರುವುದನ್ನು ಗಮನಿಸಿಕೊಂಡಾಗ ತಟ್ಟನೆ ನಮಗೆ ಒಂದು ಔನ್ನತ್ಯದ ಅರಿವಾಗುತ್ತದೆ

(sudden conception of some eminence in ourselves). ಇದೇ ನಗುವಿನ ಮೂಲ” ಎಂದು ವಿವರಿಸಿದನು. ನಗು ಒಂದು ಮಹತ್ವದ ಅರಿವು, ಅದರ ಪ್ರತಿಕ್ರಿಯೆ; ಅದು ಇದ್ದಕ್ಕಿದ್ದಂತೆ ಹಠಾತ್ತಾಗಿ ನಡೆಯುತ್ತದೆ. ಅದನ್ನು ಮೊದಲೇ ನಿರೀಕ್ಷಿಸುವುದು, ಅದಕ್ಕೆ ಸನ್ನಾಹ ಮಾಡುವುದು ಸಾಧ್ಯವಿಲ್ಲ.

ರೆನಿ ದೇಕಾರ್ತ್ (೧೫೯೬-೧೬೫೦) ಎನ್ನುವ ಫ್ರೆಂಚ್ ತತ್ವವೇತ್ತನು ನಗೆಯಲ್ಲಿ ದೈಹಿಕ ವಿವರವೂ ಸೇರಿದೆಯೆಂದು ಸೂಚಿಸಿದವರಲ್ಲಿ ಮೊದಲಿಗ. ಆದರೆ ಇವನು ದೈಹಿಕ ವಿವರಗಳನ್ನೇನು ನಿರ್ದೇಶಿಸಲಿಲ್ಲ. ನಗೆಯು ಸಂತೋಷದ ಸಂಕೇತ; ಆದರೆ ಸಂತೋಷವು ಹೆಚ್ಚಿನ ಪ್ರಮಾಣದಲ್ಲಿರಬಾರದು. ಅಷ್ಟು ಮಾತ್ರವಲ್ಲದೆ ಆಶ್ಚರ್ಯ, ದ್ವೇಷ, ಮೆಚ್ಚುಗೆ ಇಂಥ ಭಾವಗಳೂ ಅದರಲ್ಲಿ ಬೆರೆತು ಬರಬೇಕು. ಇದು ದೇಕಾರ್ತನ ವಾದ.

ಹೀಗೆಯೇ ಜಾನ್‌ಲಾಕ್ (೧೬೩೨–೧೭೦೪), ಸ್ಪಿನೋಜ (೧೬೩೨–೧೬೭೭), ಡೇವಿಡ್ ಹಾರ್ಟ್ಲಿ (೧೭೦೫–೧೭೫೭), ಅಲೆಕ್ಸಾಂಡರ್ ಪೋಪ್ (೧೬೮೮-೧೭೪೪) ಮೊದಲಾದವರು ತಂತಮ್ಮ ಅಭಿಪ್ರಾಯಗಳನ್ನು ಮಂಡಿಸಿದರು. ಇಮಾನ್ಯುಯೆಲ್ ಕಾಂಟ್ (೧೭೨೪-೧೮೦೪) ಎನ್ನುವ ಪ್ರಸಿದ್ಧ ಜರ್ಮನ್ ದಾರ್ಶನಿಕನು "ತವಕದಿಂದ ನಿರೀಕ್ಷಿಸುತ್ತಿದ್ದಾಗ ಇದ್ದಕ್ಕಿದ್ದಂತೆ ಏನೂ ಇಲ್ಲವಾಗಿಬಿಡುವುದು” (sudden transformation of a strained expectation into nothing) ನಗೆಯ ಮೂಲ ಎಂದು ನಿರೂಪಿಸಿದನು. ಎಂದರೆ ನಗೆಯ ಹಿನ್ನೆಲೆಯಲ್ಲಿ ಏನು ಮಾಡಬೇಕೆಂಬ ಅರಿವೂ

ಇರದಿರುವ ಸಂದರ್ಭವಿದೆ. “ನಗೆ ದಡ್ಡನ ಕೆಮ್ಮು”, “ಮನಸ್ಸು ಸೀನುವುದೇ ನಗೆ” ಎನ್ನುವ ಗಾದೆಗಳನ್ನು ಕೇಳಿದ್ದೀರಷ್ಟೆ.

ಆರ್ಥರ್ ಶೋಪೆನ್‌ಹೋ (೧೭೮೮–೧೮೬೦) ನಮ್ಮ ಮುಂದಿರುವ ವಸ್ತುವಿಗೂ ಅಥವಾ ಪ್ರಸಂಗಕ್ಕೂ ನಮ್ಮ ಮನಸ್ಸಿನಲ್ಲಿರುವ ಭಾವನೆಗಳಿಗೂ ತಟ್ಟನೆ ವಿರೋಧ ಒದಗಿದಾಗ ನಗೆ ಮೂಡಿಬರುತ್ತದೆ ಎಂದು ಹೇಳಿದನು. ಥಿಯೋಡರ್ ಲಿಪ್ಸ್ (೧೮೯೮) ನಿರೀಕ್ಷೆಯ ಹಿನ್ನೆಲೆಯೇ ನಗೆಯ ಸ್ವಾರಸ್ಯವೆಂದನು. ಅರಮನೆಯ ಸುತ್ತಲೂ ಅರಮನೆಯ ಶೈಲಿಯ ಗುಡಿಸಲುಗಳಿದ್ದರೆ ನಗೆ ಬರುವುದೆಂದು ಅವನ ವಾದ.

ಚಾರ್ಲಸ್ ಡಾರ್ವಿನ್ (೧೮೦೯–೧೮೮೨) ಕೂಡ ನಗೆಯ ಬಗ್ಗೆ ವಿಚಾರ ಮಾಡಿದ್ದಾನೆ. ಪ್ರಾಣಿಗಳಲ್ಲಿ ತೊಂದರೆಯಾದಾಗ ಅಳು ಹೊರಹೊಮ್ಮಿದಂತೆಯೇ ಸುಖದ ಅನುಭವವಾದಾಗ ನಗೆ ಮೂಡುತ್ತದೆ. ನಗೆಯ ಧ್ವನಿಯಲ್ಲಿ ಖಂಡಖಂಡವಾದ ಬಹಿಃಶ್ವಾಸ ಮುಖ್ಯವಾದ ವಿವರ. ಮರಿಗಳನ್ನು ತಂದೆತಾಯಿ ಪ್ರಾಣಿಗಳು ಸಂಧಿಸಿದಾಗ, ಒಂದೇ ಪಂಗಡಕ್ಕೆ ಸೇರಿದ ಪ್ರಾಣಿಗಳು ಕಲೆತಾಗ ಸುಖಾನುಭವವನ್ನು ಪರಸ್ಪರ ತಿಳಿಯಪಡಿಸಲು ನಗೆ ಒಂದು ಸಾಧನ. ಹರ್ಬರ್ಟ್ ಸ್ಪೆನ್ಸರ್ (೧೮೨೦–೧೯೦೩) ಮಂಡಿಸಿದ ನಗೆಯ ವಿವರಣೆಯನ್ನು ಡಾರ್ವಿನ್ ಒಪ್ಪಿಕೊಂಡ. ಸ್ಪೆನ್ಸರ್ ಪ್ರಕಾರ ತಂತ್ರಿಕೆಗಳ ಊರ್ಜೆಯು ಅತಿಯಾದಾಗ, ಹೆಚ್ಚಿನ ಭಾಗವು ಅಭ್ಯಾಸಬಲದಿಂದ ಮಾತಿನ ಅವಯವ ಮತ್ತು ಉಸಿರಾಡುವ ಅಂಗಗಳ

ಮೂಲಕ ಹೊರಹರಿಯುತ್ತದೆ (overflow of nervous energy *via* speech apparatus and respiratory mechanism). ಹಾಗೆ ಹೊರಹರಿದುಬಿಟ್ಟರೆ ಶರೀರ ದಲ್ಲಿ ಸ್ವಾಸ್ಥ್ಯ; ಹರಿಯದೆ ಒಳಗೇ ಉಳಿದರೆ ಶರೀರ ವೆಲ್ಲ ಕಂಪಿಸತೊಡಗುತ್ತದೆ. ಡಾರ್ವಿನ್ ಕೊಟ್ಟ ಉದಾ ಹರಣೆ ಸ್ವಾರಸ್ಯವಾಗಿದೆ. ಯುದ್ಧರಂಗದಲ್ಲಿ ಸೈನಿಕರು ಪ್ರಬಲವಾದ ಆತಂಕಕ್ಕೀಡಾಗಿ ಕ್ಷಣಗಂಡ ಅನುಭವಿಸಿದ ನಂತರ ಸಣ್ಣದೊಂದು ಹಾಸ್ಯದ ಮಾತಿಗೂ ಗಟ್ಟಿಯಾಗಿ ನಗುತ್ತಾರೆ. ಉದ್ವೇಗ, ಆತಂಕದಿಂದ ತಂತ್ರಿಕೆಗಳ ಊರ್ಜೆ ಮಿತಿಮೀರಿ ಹೆಚ್ಚುತ್ತದೆ.

ಹೆನ್ರಿ ಬರ್ಗ್‌ಸೊನ್ (೧೮೫೯-೧೯೪೧) ಪ್ರಕಾರ ಬದುಕಿನಲ್ಲಿ ನಡತೆ ಯಾಂತ್ರಿಕವಾಗಿಬಿಟ್ಟರೆ ಅದು ನಗೆ ಪಾಟಲಾಗುತ್ತದೆ. ನಗೆಗೆ ಸಾಮಾಜಿಕ ಪ್ರಯೋಜನ ವುಂಟೆಂದು ಅವನ ವಾದ. ಸಾಮಾಜಿಕವಾಗಿ ನಿರುಪ ಯುಕ್ತವಾದ ಅಥವಾ ಕಂಟಕಕಾರಿಯಾದ ನಡತೆಯನ್ನು ತಿಳಿಯಪಡಿಸುವುದೇ, ಖಂಡಿಸುವುದೇ ನಗೆಯ ಉದ್ದೇಶ ವೆಂದು ಸ್ಪಷ್ಟಪಡಿಸಿದ ಜೇಮ್ಸ್ ಸಲ್ಲಿ ೧೯೦೭ ರಲ್ಲಿ ನಗೆಯ ಬಗ್ಗೆ ಸಿದ್ಧಾಂತವೊಂದನ್ನು ಮಂಡಿಸಿ ಚೇಷ್ಟೆ ಅಥವಾ ಹುಡುಗಾಟಿಕೆ (Play-mood) ನಗೆಯ ಮುಖ್ಯ ರಸವೆಂದು ವಾದಿಸಿದನು. ಸುಂದರವಾದ ವಸ್ತುವನ್ನು ನೋಡಿದಾಗ ಒದಗುವ ಸೌಂದರ್ಯಾನುಭೂತಿ ಯಂತೆಯೇ ಸಂದರ್ಭದಲ್ಲಿ ನೋಡಿದ ಒಳ್ಳೆಯತನದಿಂದ (felt goodness of the environment) ನಗೆ ಹೊರ ಹೊಮ್ಮುವುದೆಂದು ಹೊರೆಸ್ ಕ್ಯಾಲ್ಲೆನ್ ಎಂಬ ಮನೋ ವಿಜ್ಞಾನಿ ೧೯೧೯ ರಲ್ಲಿ ನಿರೂಪಿಸಿದನು.

ನಗೆಯನ್ನು ಕುರಿತು ಹೊರಬಂದ ವಿಚಾರಧಾರೆಯಲ್ಲಿ ವಿಲಿಯಂ ಮೆಕ್‌ಡೂಗಲ್ (೧೮೭೧-೧೯೩೮) ಎನ್ನುವ ಮನೋ ವಿಜ್ಞಾನಿಯು ಮಂಡಿಸಿದ ನಿಲುವು ಮುಖ್ಯವಾದುದು. ೧೯೦೩ರಲ್ಲಿ ಬರೆದ ಒಂದು ಪ್ರಬಂಧದಲ್ಲಿ ಈತನು ನಗೆಯೆನ್ನುವುದು ಸಂತೋಷದ ಸೂಚನೆಯಲ್ಲ, ಸಂಕಟ ಪರಿಸ್ಥಿತಿಯೇ ನಗೆಯ ಹಿನ್ನೆಲೆ, ನಾವು ನಗದಿದ್ದರೆ ಅಳಬೇಕಾಗುತ್ತದೆ, ಎಂದು ಸೂಚಿಸಿದನು. ಇದರ ವಿವರಣೆ ಮುಂದೆ ಬರುತ್ತದೆ.

ಮನೋವಿಶ್ಲೇಷಣ ಪದ್ಧತಿಯಲ್ಲಿ ಸಿಗ್ಮಂಡ್ ಫ್ರಾಯ್ಡ್ ೧೯೦೫ರಲ್ಲಿ ಹಾಸ್ಯದ ಬಗ್ಗೆ ಅಭಿಪ್ರಾಯವನ್ನು ಪ್ರಕಟಿಸಿದನು. ಕನಸಿನ ವ್ಯಾಪಾರಕ್ಕೂ ಹಾಸ್ಯದ ಪ್ರವೃತ್ತಿಗೂ ಇರುವ ಸಾದೃಶ್ಯ ಅವನ ಗಮನವನ್ನು ಸೆಳೆಯಿತು. ಹಾಸ್ಯದ ಅಲ್ಪಾಭಿವ್ಯಕ್ತಿ (economy) ಯ ಹಿಂದೆ ಸುಪ್ತಚೇತನದ ಪ್ರಯೋಜನವಿರುವುದು, ಹಾಸ್ಯದ ಉದ್ದೇಶ ಸಂತೋಷವನ್ನುಂಟುಮಾಡುವುದೇ ಆಗಿರುವುದು, ಮಾನಸಶಕ್ತಿಯ ವ್ಯಯ ಇಲ್ಲಿ ನಡೆಯುವುದು, ಸಂಘರ್ಷಕ ಮನೋವೃತ್ತಿಯೂ ಹಾಸ್ಯದಲ್ಲಿ ಅಡಗಿರುವುದು ಫ್ರಾಯ್ಡನ ಸಿದ್ಧಾಂತದಲ್ಲಿ ಎದ್ದು ನಿಲ್ಲುವ ವಿವರಗಳು.

ಹೀಗೆ ನಗೆಯನ್ನು ಕುರಿತು ಸಿದ್ಧವಾಗಿರುವ ವಿಚಾರಧಾರೆ ವಿಪುಲವಾಗಿದೆ. ಸ್ವಾರಸ್ಯವಾದ ವಿವರಗಳು ಹೊರಬಿದ್ದಿವೆಯಾದರೂ ನಗೆಯ ಅರ್ಥ, ತಾತ್ಪರ್ಯ ಸ್ಫುಟವಾಯಿತೆನ್ನುವ ಹಾಗಿಲ್ಲ. ವಿಚಾರಗಳಲ್ಲಿ ಒಮ್ಮತವೂ ಅಷ್ಟಾಗಿ ಕಾಣಬರುವುದಿಲ್ಲ.

ನಗೆಯ ಹಿನ್ನೆಲೆ ಸುಖವೋ, ದುಃಖವೋ? ನಗೆ ಸಹಜವಾದ ಪ್ರವೃತ್ತಿಯೋ ಕಲಿತ ವಿದ್ಯೆಯೋ? ನಗೆಯಲ್ಲಿ ಸಾಮಾಜಿಕ ವ್ಯಾಪಾರವಿದೆಯೋ ಇಲ್ಲವೋ? ನಗೆಯ ದೈಹಿಕ ವಿಚಾರಗಳು ಯಾವುವು? ಭಾವಕ್ಕೂ ನಗೆಗೂ ಸಂಬಂಧವಿದೆಯೋ ಇಲ್ಲವೋ? ನಗೆಯಲ್ಲಿ ಸುಪ್ತಚೇತನದ ಪಾತ್ರ ಎಷ್ಟು? ಈ ಪ್ರಶ್ನೆಗಳಿಗೆಲ್ಲ ನಿರ್ವಿವಾದವಾದ ಸಮಾಧಾನ ಇನ್ನೂ ಸಿದ್ಧವಾಗಿಲ್ಲ. ಹಾಗೂ ಹೇಳುತ್ತಾರೆ, ಹೀಗೂ ಹೇಳುತ್ತಾರೆ; ಉಂಟು ಎನ್ನುತ್ತಾರೆ, ಇಲ್ಲ ಎನ್ನುತ್ತಾರೆ. ಖಚಿತ, ನಿಶ್ಚಿತ, ಸ್ಪಷ್ಟ ಎನಿಸಿಕೊಳ್ಳುವ ವಿವರಗಳು ತೀರ ಕಡಮೆ.

ಹೀಗೆಂದು ಸಮಸ್ಯೆಯನ್ನು ಕೈಬಿಡುವ ಕಾರಣ ವಿಲ್ಲ. ಯಾವ ಒಂದು ವಿಚಾರವೂ ಸಿದ್ಧಾಂತವಲ್ಲ ದಿದ್ದರೂ ಅದರಲ್ಲಿ ಅರ್ಥವಿಲ್ಲದೆ ಇಲ್ಲ. ನಗೆಯ ತತ್ವ ಸಂಪೂರ್ಣವಾಗಿ ಕಗ್ಗತ್ತಲೆಯಲ್ಲಿ ಅಡಗಿದೆ ಎನ್ನ ಬೇಕಾಗಿಲ್ಲ. ಸ್ಫುಟವಾಗಿರುವ ವಿವರಗಳನ್ನು ಪರಿಶೀಲಿ ಸಿದರೆ ನಗೆಯ ಒಗಟು ಅಷ್ಟಿಷ್ಟು ತಿಳಿಯಾಗುತ್ತದೆ. ವಿಚಾರಗಳನ್ನೇ ಹಿಡಿದು ನೋಡುವುದಕ್ಕಿಂತ ನಗೆಯ ಸಂದರ್ಭಗಳನ್ನು ವಿಶ್ಲೇಷಿಸಿದರೆ ನಗೆಯ ನೆಲೆಯೇ ನೆಂಬುದು ಸುಲಭವಾಗಿ ಅರ್ಥವಾದೀತು.

## ದೇಹದಲ್ಲಿ ಸಿದ್ಧತೆ

ನಗೆ ಸಹಜ ಪ್ರವೃತ್ತಿಯೋ ಅಥವಾ ಕಲಿತ ಪ್ರತಿ ಕ್ರಿಯೆಯೋ ಎನ್ನುವ ವಿಚಾರವಾಗಿ ಅಧ್ಯಯನ ನಡೆ ದಿದೆ. ಮಗು ಹುಟ್ಟಿದೊಡನೆಯೇ ನಗೆಯ ಸಾಮರ್ಥ್ಯ ಕಾಣಿಸದಿದ್ದರೂ ನಗೆಗೆ ಮಾನಸಿಕವಾದ, ದೈಹಿಕವಾದ

ನೆಲೆಗಳಿವೆಯೆಂಬಷ್ಟೆ. ಸಂದರ್ಭದ ಸ್ವಾರಸ್ಯವನ್ನು ಗ್ರಹಿಸಿ ಅದಕ್ಕೆ ಅನುಗುಣವಾದ ಪ್ರತಿಕ್ರಿಯೆಯನ್ನು ಹೊರ ಪಡಿಸುವುದು ಮಾನಸಿಕ ನೆಲೆ. ಇದಕ್ಕೆ ಮಿದುಳಿನ ಬೆಳ ವಣಿಗೆ, ಬುದ್ಧಿಶಕ್ತಿಯ ವಿಕಾಸ, ಸಾಮಾಜಿಕ ಕೌಶಲ ಇವು ಅಗತ್ಯವಾದ ವಿವರಗಳು. ಮಗು ಮನೆಯಲ್ಲಿಯೂ ಸಮಾಜದಲ್ಲಿಯೂ ಬೆಳೆಯುವಾಗ ಇವು ಒದಗುತ್ತದೆ. ಆದರೆ ಇದಕ್ಕೂ ಮೂಲಭೂತವಾಗಿ ಶರೀರ ರಚನೆಯಲ್ಲಿ ನಗೆಯ ಅಭಿವ್ಯಕ್ತಿಗೆ ಅವಕಾಶವಿರುವುದು ಗಮನಾರ್ಹ ವಾದುದು.

ನಗೆ ಮುಖದಲ್ಲಿ ವ್ಯಕ್ತವಾಗುತ್ತದೆ, ಅಂಗಭಂಗಿ ಗಳಲ್ಲಿ ಹೊರಬರುತ್ತದೆ, ಮಾತಿನಲ್ಲಿ ಮೂಡುತ್ತದೆ. ಮುಖ್ಯವಾಗಿ ಮುಖವೇ ನಗೆಯ ಕನ್ನಡಿ. ಮುಖ ದಲ್ಲಿನ ಮಾಂಸಗಳು, ಸ್ನಾಯುಗಳು, ನರಗಳು, ಸಂಧಿ ಗಳು ನಗೆಗೆ ಅವಕಾಶ ಮಾಡಿಕೊಡುತ್ತವೆ. ಮನುಷ್ಯನ ಮುಖದಲ್ಲಿ ಮಾತ್ರ ಇದು ಸಾಧ್ಯ ಎಂದರೆ ತಪ್ಪಲ್ಲ. ನಾಯಿಯ, ಕುದುರೆಯ, ಹಸುವಿನ, ಹಂದಿಯ, ಅಳಿಲಿನ ಮುಖದಲ್ಲಿ ನಗೆ ಸಾಧ್ಯವೇ ಇಲ್ಲ, ಮನುಷ್ಯ ನಿಗಿಂತ ಕೆಳಗಿನ ನೆಲೆಯ ಪ್ರಾಣಿಗಳ ಮುಖರಚನೆ ನಗೆಗೆ ಒಗ್ಗುವುದಿಲ್ಲ. ಅವುಗಳ ಮುಖದಲ್ಲಿ ಬಿಗಿ ಹೆಚ್ಚು; ಅಲ್ಲಿನ ಮಾಂಸಖಂಡಗಳು ಹಿಗ್ಗಲಾರವು, ಕುಗ್ಗಲಾರವು; ಬೇಕೆಂದಹಾಗೆ ಜಗ್ಗಾಡಲಾರವು. ಮನುಷ್ಯರ ಮುಖ ದಲ್ಲಿ ಈ ಸೌಲಭ್ಯ ವಿಶೇಷವಾಗಿದೆ. ನಗೆಯಲ್ಲಿ ಮುಖ ಅರಳುವುದು, ಊರಗಲ ಆಗುವುದು ಈ ಕಾರಣ ದಿಂದಲೇ.

ಕಣ್ಣು, ಬಾಯಿ ಇವು ನಗೆಯನ್ನು ಸ್ಪಷ್ಟವಾಗಿ ಪ್ರಕಟಿಸುತ್ತವೆ. ಎಲ್ಲ ಭಾವ ಪ್ರದರ್ಶನಕ್ಕೂ ಈ ಅವಯವಗಳು ನೆರವಾಗುತ್ತವೆಯೆನ್ನಿ. ವಿಜ್ಞಾನಿಗಳು ಕಣ್ಣಿನಿಂದ ಎಂಬತ್ತೈದು ಬಗೆಯ ಭಾವಗಳನ್ನೂ, ಬಾಯಿಯಿಂದ ತೊಂಬತ್ತೇಳು ಬಗೆಯ ಭಾವಗಳನ್ನೂ ವ್ಯಕ್ತಪಡಿಸಬಹುದೆಂದು ಕಂಡುಹಿಡಿದಿದ್ದಾರೆ. ನಗುವಾಗ ಕಣ್ಣು ಹೊಳೆಯುವುದನ್ನು ನೀವು ಗಮನಿಸಿರಬಹುದು. ಭಾವ ಮೂಡಿದಾಗ ಕಣ್ಣಿನೊಳಗಿರುವ ಶ್ಲೇಷ್ಮಚ್ಛಿಲ್ಲಿಕೆ (mucous membrane)ಯ ರಕ್ತನಾಳಗಳು (pupil) ಹಿಗ್ಗುತ್ತವೆ. ಇದೇ ಕಣ್ಣಿನ ಹೊಳಪಿನ ಕಾರಣ.

ನಗೆ ಸ್ಮಿತವಾದಾಗ ಮುಖವೇ ಅದರ ಸೂಚಿಕೆ. ತುಟಿಗಳ ಬಿರುಕು, ಕೊನೆಯ ಎಳೆತ, ಗಲ್ಲದ ಪೇಶಿಗಳ ಉಬ್ಬುವಿಕೆ, ಇವು ಕಣ್ಣಿನ ಹೊಳಪಿಗೆ ಹಿನ್ನೆಲೆಯನ್ನು ಒದಗಿಸುತ್ತವೆ. ಇದರಲ್ಲಿ ಶಬ್ದವಿರದಿದ್ದರೂ ಇದು ನಗೆಯೆಂದೂ, ಸಂತೋಷದ ಸಂಕೇತವೆಂದೂ, ನೋಡಿದರೆ ಹೇಳಬಹುದು. ಅದನ್ನು ಎಷ್ಟು ಸಂಯಮದಿಂದಾಗಲೀ ಬಚ್ಚಿಟ್ಟುಕೊಳ್ಳುವುದಾಗದು.

"ನಗೆ ಹವಣೆತ್ತಾದೊಡೆ ವಿಹಸಿತ" ; ಅದು ಪೆರ್ನಗೆ. ಇದರಲ್ಲಿ ಕೇಕೆ, ಗಹಗಹ ಒದಗಿಬರುತ್ತದೆ. ನಗುವಾಗ ಹೊರಹೊರಡುವ ಶಬ್ದವನ್ನು ಯಾರು ಕೇಳಿಲ್ಲ ? ಇದು ನಗುವಿನ ಮಾತು; ಬಲ್ಲವರಿಗೆ ಇದರಲ್ಲಿ ಅರ್ಥ ಬಹಳ ಉಂಟು. ಉಸಿರಾಟಕ್ಕೂ ಈ ಗಹಗಹಕ್ಕೂ ಸಂಬಂಧವಿದೆ. ಎರಡಕ್ಕೂ ಶ್ವಾಸಕೋಶದ

ರಚನೆಯೋ ಹಿನ್ನೆಲೆ. ಮನುಷ್ಯನ ಶ್ವಾಸಕೋಶದ
ರಚನೆಯಲ್ಲಿ ಮಾತಿಗೂ ನಗೆಗೂ ಸೌಲಭ್ಯವಿದೆ ; ಉಳಿದ
ಪ್ರಾಣಿಗಳಲ್ಲಿ ಇದು ಅಷ್ಟಾಗಿ ಇರದು. ಶ್ವಸನಪೇಶಿಗಳು
ಲಗುಬಗೆಯಿಂದ, ಮತ್ತೆ ಮತ್ತೆ, ಲಯಬದ್ಧವಾಗಿ
ಬಿರುಸಾಗಿ ಆಕರ್ಷ–ಆಕುಂಚನ (spasmodic contrac
tions) ಗೊಂಡರೆ ಶ್ವಾಸಕೋಶದೊಳಗಿನ ಗಾಳಿ ಕಂಠ
ದ್ವಾರ (glottis) ದಿಂದಲೂ ಮೇಲ್ಭಾಗದ ವಾಯು
ದ್ವಾರಗಳಿಂದಲೂ ಹೊರಗೆ ನುಗ್ಗಿ ಬರುತ್ತದೆ. ಈ ಶ್ವಸನ
ಪೇಶಿಗಳಲ್ಲಿ ಮುಖ್ಯವಾದುದು ವಪೆ ಅಥವಾ ಮಧ್ಯಚ್ಛದ
(diaphragm). ಹೊಟ್ಟೆಗೂ ಎದೆಗೂ ನಡುವೆ
ಇರುವ ಈ ವಪೆ ಡುಬ್ಬದಂತಿರುವ ಮುಚ್ಚಿಗೆ. ಇದು
ಉಬ್ಬಬಲ್ಲದು, ಚಪ್ಪಟೆಯೂ ಆಗಬಲ್ಲುದು. ಇದನ್ನು
ತನುಪಟ ಎಂದೂ ಕರೆಯುತ್ತಾರೆ. ಇದು ತನ್ನ ಸಹಜ
ಸ್ಥಿತಿಯಲ್ಲಿ ವಿಳಂಬಗತಿಯ ಲಯಬದ್ಧ ಆಕುಂಚನ
ಕ್ರಿಯೆಯಲ್ಲಿ ತೊಡಗಿರುತ್ತದೆ. ನಗುವ ಸಂದರ್ಭ
ಬಂದಾಗ ಇದರ ಗತಿ ದ್ರುತವಾಗಿ, ವಿಷಮವಾಗಿ,
ಆಕರ್ಷ (spasm) ವಾಗಿ ಪರಿಣಮಿಸುತ್ತದೆ. ಹೀಗೆ
ಸಹಜಸ್ಥಿತಿಯಲ್ಲಿ ವಿಕಾರವಿದ್ದಾಗ ಗಾಳಿ ದಡದಡನೆ
ಹೊರಹೊರಟು ಗಹಗಹ ಶಬ್ದ ಕೇಳಿಸುತ್ತದೆ.

ಈ ವಿಕಾರ ಹೆಚ್ಚಾದರೆ ಬಿಕ್ಕಳಿಕೆ, ವಾಂತಿಯಾಗು
ವುದೂ ಉಂಟು. ವಪೆಯ ಲಯಬದ್ಧ ಕ್ರಿಯೆಯಲ್ಲಿ
ತೊಡಕು ಬಂದು ಉಸಿರಾಟದಲ್ಲಿ ಏರುಪೇರಾಗುವುದೇ
ಬಿಕ್ಕಳಿಕೆ. ನಗೆ ಅತಿಯಾದರೆ ಬಿಕ್ಕಳಿಕೆ ಬರುವ ಪ್ರಸಂಗ
ನಿಮ್ಮ ಅನುಭವದಲ್ಲಿರಬಹುದು. ಕೆಲವೊಮ್ಮೆ ವಪೆಯಲ್ಲಿ
ಬಲವಂತವಾದ ಆಕುಂಚನವಾಗಿ, ಜಠರಕೋಶವನ್ನು

ಅದು ಆಡುಮಿ ಒಳಗಿರುವ ಪದಾರ್ಥಗಳನ್ನು ಹೊರಚೆಲ್ಲಿ ಬಿಡುತ್ತದೆ. ಇದು ವಾಂತಿಯೆನಿಸಿಕೊಳ್ಳುತ್ತದೆ. ತಡೆಯಲಾರದ ನಗುವಿನಿಂದ ವಾಂತಿಯಾಗುವುದನ್ನು ನೀವು ನೋಡಿರಬಹುದು; ಆದರೆ ಇದು ಅಪರೂಪ.

ನಗೆ ಮಿತಿಮಿರಿದಾಗ ವಿಕಾರ ಮುಖದ ಪೇಶಿಗಳು, ಶ್ವಸನ ಪೇಶಿಗಳು ಇವುಗಳಿಗೇ ಸೀಮಿತವಾಗುವುದಿಲ್ಲ. ಈ ಎಲ್ಲೆಯನ್ನೂ ದಾಟಿ ದೇಹದ ಇತರ ಪೇಶಿಗಳಿಗೂ ಇದರ ಪ್ರಭಾವ ಹರಡುತ್ತದೆ. 'ಹೊಟ್ಟೆ ಹುಣ್ಣಾಗು ವಂತೆ ನಗುವವರು, ಪಕ್ಕೆ ಹಿಡಿದುಕೊಂಡು ನಗುವವರು, ನಗುವನ್ನು ತಡೆಯಲಾರದೆ ಉಸಿರುಕಟ್ಟುವವರು, ತೂಗಾಡುವವರು, ಹೊರಳಾಡುವವರು ಇದಕ್ಕೆ ನಿದರ್ಶನಗಳು, ನಗೆಯನ್ನು ತಡೆಯಲಾರದೆ ನಕ್ಕು ಮಿದುಳಿನಲ್ಲಿ ರಕ್ತ ಸ್ರಾವವಾಗಿ ಸತ್ತಿರುವ ನಿದರ್ಶನಗಳೂ ಉಂಟೆನ್ನಿ.

ಅಂತೂ ನಗೆಯ ಸಂದರ್ಭದಲ್ಲಿ ದೈಹಿಕವಿಕಾರಗಳು ಸ್ಪಷ್ಟವಾಗಿವೆ. ದೇಹದ ರಚನೆಯಲ್ಲಿ ನಗೆಯ ಅಭಿವ್ಯಕ್ತಿಗೆ ಅಗತ್ಯವಾದ ಸಾಧನಗಳನ್ನು ಪ್ರಕೃತಿ ಒದಗಿಸಿದೆ. ನಗೆ ಕೇವಲ ಕಲಿತ ಪ್ರತಿಕ್ರಿಯೆಯಲ್ಲ; ಸಹಜ ಪ್ರವೃತ್ತಿಯೇ ಎಂದು ವಾದಿಸಲು ಈ ವಿವರ ನೆರವಾಗು ತ್ತದೆ. ನಗೆಯಿಂದ ಜೀವಿಗೆ ಪ್ರಯೋಜನವಿದ್ದೇ ಇರಬೇಕು ಎನ್ನುವುದೂ ಇದರಿಂದಲೇ ಸಿದ್ಧವಾಗುತ್ತದೆ. ನಗೆಯು ಯಾವುದೋ ಆಕಸ್ಮಿಕವಾದ, ಆಗಂತುಕವಾದ, ನಿಷ್ಪ್ರಯೋಜಕವಾದ ವ್ಯಾಪಾರ ವಿಶೇಷವಾಗಿದ್ದರೆ ಅದಕ್ಕೆ ದೇಹದಲ್ಲಿ ಈ ಸಿದ್ಧತೆಯಿರುವ ಸಂಭವ ಕಡಮೆಯಿರುತ್ತಿದ್ದಿತು.

ಭಾವದ ಅಭಿವ್ಯಕ್ತಿಗೆ ಒಗ್ಗುವಂಥ ಸಿದ್ಧತೆಯೇ ನಗೆಯ ವಿಚಾರದಲ್ಲಿ ಕೂಡ ಇದೆ ಎನ್ನುವ ಕಾರಣದಿಂದ ನಗೆಯನ್ನು ಭಾವ-ಪ್ರತಿಕ್ರಿಯೆ(emotional reaction) ಎಂದು ಮನೋವಿಜ್ಞಾನಿಗಳು ನಿರ್ದೇಶಿಸಿದ್ದಾರೆ. ಭಾವವು ಸಂದರ್ಭವನ್ನು ಅವಲಂಬಿಸಿ, ಪ್ರಚೋದಿತವಾದ ಪ್ರತಿಕ್ರಿಯೆ; ಇದರಲ್ಲಿ ವಿಪುಲವಾದ ದೈಹಿಕ ವಿಕಾರಗಳು ಒದಗಿ ಬರುತ್ತವೆ. ಅನುಕೂಲವಾದ ಸಂದರ್ಭ ಏರ್ಪಡುವಂತೆ ಕೆಲಸಕ್ಕೆ ಜೀವಿಯನ್ನು ಉಜ್ಜುಗಿಸುವ ವಿಧಾನ ಇದು; ಕೆಲಸಕ್ಕೆ ಅಗತ್ಯವಾದ ಊರ್ಜೆಯನ್ನು ಭಾವ ಒದಗಿಸುತ್ತದೆ. ಭಾವದ ಅನುಭವದಲ್ಲಿ ಸುಖ-ದುಃಖ ಎಂದು ಎರಡು ಮುಖ್ಯ ಪ್ರಕಾರಗಳು. ಅಭಿವ್ಯಕ್ತವಾಗುವ ಎಲ್ಲ ಭಾವಗಳನ್ನೂ ಈ ಎರಡರಲ್ಲಿ ಅಳವಡಿಸಬಹುದು. ನಗೆ ಸುಖದ ವರ್ಗಕ್ಕೆ ಸೇರಿದ ಭಾವ. ಅನುಭವಿಸಿದ ಸುಖ ಭಾವವನ್ನು ಅಭಿವ್ಯಕ್ತಗೊಳಿಸುವುದೇ ನಗೆ. ಭಾವವನ್ನು ಹೊರಸೂಸಿದೊಡನೆ ಮೈಯೂ ಮನಸ್ಸೂ ಹಗುರವಾಗುವುದು ನಗೆಯ ವಿಚಾರದಲ್ಲಿಯೂ ನಿಜ.

ಮನುಷ್ಯನಲ್ಲಿ ನೂರಾರು ಭಾವಗಳಿವೆ; ಅವೆಲ್ಲ ನೈಸರ್ಗಿಕವಾದುವಲ್ಲ; ಹುಟ್ಟಿದೊಡನೆ ಸಿದ್ಧವಾದುವೂ ಅಲ್ಲ; ದೇಹದಲ್ಲಿ ಸರಿಯಾದ ಸೌಲಭ್ಯವನ್ನು ಪಡೆದುಕೊಂಡವೂ ಅಲ್ಲ. ಮಗು ಹುಟ್ಟಿದೊಡನೆ ಅಥವಾ ಹುಟ್ಟಿದ ತರುಣದಲ್ಲಿಯೇ ಬಯಲಿಗೆ ಬರುವ ಭಾವಗಳು ಯಾವುವು ಎಂದು ಮನೋವಿಜ್ಞಾನಿಗಳು ಅಧ್ಯಯನ ನಡೆಸಿದ್ದಾರೆ. ಸಂಶೋಧನೆಗಳಿಂದ ಭಯ, ಕ್ರೋಧ, ಸ್ಮಿತ ಇವು ಮೂರೂ ಹೆಚ್ಚೂ ಕಡಿಮೆ ಸಹಜವಾದುವು

ಎಂದು ತಿಳಿದುಬರುತ್ತದೆ. ಭಯ ಮತ್ತು ಕ್ರೋಧ ಎರಡೂ ಅಪ್ರಿಯ (ದುಃಖ)ದ ವರ್ಗಕ್ಕೆ ಸೇರಿದ ಭಾವಗಳು, ಸ್ಮಿತ ಪ್ರಿಯ(ಸುಖ)ದ ವರ್ಗಕ್ಕೆ ಸೇರಿದುದು. ಎಳೆಯ ಮಗುವಿನ ಗಲ್ಲವನ್ನು ನೇವರಿಸಿದರೆ, ದೇಹಸ್ಥಿತಿ ಸಮಾಧಾನದಲ್ಲಿದ್ದರೆ, ತೊಟ್ಟಿಲು ತೂಗಿ ಹಿತವೆನಿಸಿದರೆ ಮಗು ನಗುತ್ತದೆ. ಹುಟ್ಟಿದ ಕೆಲವು ದಿನಗಳ ನಂತರ ಮೂಡುವ ಸಂವೇಗ(excitement) ಒಂದೆರಡು ತಿಂಗಳು ಗಳಲ್ಲೇ ಕವಲೊಡೆದು ದುಃಖ, ಸುಖಗಳಾಗುತ್ತವೆ. ಐದಾರು ತಿಂಗಳುಗಳಲ್ಲೇ ನಗೆಯು ಸುಖದ ಅಭಿವ್ಯಕ್ತಿಗೆ ನಿರ್ದಿಷ್ಟವಾದ ಪ್ರತಿಕ್ರಿಯೆಯಾಗುತ್ತದೆ. ಮುಂದಿನ ಬೆಳವಣಿಗೆಯಲ್ಲಿ ಇದು ಬೇರೂರುವುದಲ್ಲದೆ, ಇದರ ಶಾಖೋಪಶಾಖೆಗಳು ಸಿದ್ಧವಾಗುತ್ತವೆ. ಹೊರಗಿನ ವಾತಾವರಣದಲ್ಲಿ ನಗೆಯನ್ನು ತರುವ ಹಲವಾರು ಸಂದರ್ಭಗಳನ್ನು ಗುರುತಿಸುವುದು ಒಂದು ವರ್ಷದ ಮಗುವಿಗೆ ಸಾಧ್ಯ. ಉಳಿದ ಭಾವಗಳೂ ವಿಕಸಿತವಾದಾಗ ಅವುಗಳ ಪ್ರಭಾವ ಈ ಸುಖ ಭಾವದ ಮೇಲೆ ಬೀಳುತ್ತದೆ. ಸಮಾಜದ ಅರಿವೂ ಮಗುವಿಗೆ ಆಗತೊಡಗಿದಾಗ ಭಾವಗಳ ನಿಯಂತ್ರಣ, ಪರಿವರ್ತನೆಗಳ ಅಗತ್ಯವನ್ನು ಮಗು ಕಂಡುಕೊಳ್ಳುತ್ತದೆ. ಸಹಜವಾಗಿಯೇ ಮೂಡಿದ ನಗೆಯನ್ನು ಸಂದರ್ಭಾನುಸಾರ ತಡೆಯುವ, ಮಾರ್ಪಡಿ ಸುವ ಅನುಕೂಲ ಬೆಳವಣಿಗೆಯ ಒಂದು ಹಂತ. ಮಗುವಿನ ಮೈ ಮತ್ತು ಮನಸ್ಸು ಎರಡೂ ಸಾಕಷ್ಟು ಪ್ರಗಲ್ಭವಾದಾಗಲೇ ಇದು ಸಾಧ್ಯ.

ಅಂತೂ ನಗೆಗೆ ಪೂರ್ವಭಾವಿಯಾಗಿ ದೇಹದಲ್ಲಿ ಸಿದ್ಧತೆಯಿರಬೇಕು. ಅದು ದಿಟವಾಗಿ ದೈಹಿಕ ವಿಕಾರ

ವಾಗಿಯೇ ಅಭಿವ್ಯಕ್ತವಾಗುತ್ತದೆ. ನಗೆಯನ್ನು ಹೊರ ಸೂಸುವ ಸಾಧನ ಸಹಜವಾಗಿ ಶರೀರದಲ್ಲೇ ಒದಗುತ್ತದೆ. ಇಷ್ಟು ಹೇಳಿದ ಮೇಲೆ ನಗೆಯ ಪ್ರಯೋಜನ ಏನು ಎನ್ನುವ ಸಮಸ್ಯೆ ಅನಿವಾರ್ಯವಲ್ಲವೆ ? ದೇಹದ ಒಂದೊಂದು ಅಂಗಕ್ಕೂ, ಒಂದೊಂದು ಕ್ರಿಯೆಗೂ, ಒಂದೊಂದು ಪ್ರವೃತ್ತಿಗೂ ಪ್ರಯೋಜನವಿದ್ದೇ ಇದೆ; ಭಾವ ವರ್ಗಗಳಿಗೆಲ್ಲ ಮೂಲಭೂತವಾದ ಪ್ರಯೋಜನ ವಿದೆ. ಸರಿಯಾದ, ಸಮರ್ಥವಾದ ಕೆಲಸಕ್ಕೆ ಅಣಿ ಮಾಡುವುದೇ ಭಾವದ ಉದ್ದೇಶ. ಜೀವಕ್ಕೆ ಘಾತಕ ವಾದ ಪ್ರಚೋದನೆ ಎದುರಿದ್ದಾಗ ನಾವು ಹೆದರುತ್ತೇವೆ; ಇದು ಆ ಸಂದರ್ಭದಿಂದ ದೂರ ಸರಿಯಲು ಅಗತ್ಯ. ಅಥವಾ ಸಿಟ್ಟಿಗೆದ್ದು ಘಾತಕವೆನಿಸಿದುದನ್ನು ತೊಡೆದು ಹಾಕಲೆತ್ನಿಸುತ್ತೇವೆ ; ಜೀವ ಉಳಿಯಲು ಇದು ಅಗತ್ಯ. ಇವೆರಡಕ್ಕೂ ಜೀವಸಂರಕ್ಷಣೆ, ಅಥವಾ ಆತ್ಮಗೋಪನ ಮುಖ್ಯ ಪ್ರಯೋಜನ. ಹಾಗೆಯೇ ನಗೆಗೆ ಏನಾದರೂ ನಿರ್ದಿಷ್ಟ ಪ್ರಯೋಜನವನ್ನು ಹೇಳಬಹುದೆ ?

### ನಗೆಯ ಪ್ರಯೋಜನ

ನಗೆಗೂ ಪ್ರಯೋಜನವಿದೆ ಎನ್ನುವುದೇನೋ ನಿರ್ವಿವಾದ. ಇಲ್ಲವಾದರೆ ಬಾಳಿನಲ್ಲಿಯೂ ದೇಹ ದಲ್ಲಿಯೂ ಅದರ ಪ್ರಸಕ್ತಿಯೇನು ? ಆದರೆ ಅದರ ಪ್ರಯೋಜನ ನಿರ್ದಿಷ್ಟವಾಗಿ ಏನು ಎಂದು ಹೇಳ ಬಹುದೆ ? ಇದು ಅಷ್ಟು ನಿರ್ವಿವಾದವಲ್ಲ. ಈ ವಿಚಾರದಲ್ಲಿ ವಾದ-ವಿವಾದಗಳಿವೆ, ಊಹೆಗಳಿವೆ, ವಿಲಿಯಂ ಮೆಕ್‌ಡೂಗಲ್ ಎನ್ನುವ ಮನೋವಿಜ್ಞಾನಿಯ ಪ್ರಸ್ತಾಪ ಆಗಲೇ ಬಂದಿದೆಯಷ್ಟೆ. ಇವನ

ಪ್ರಕಾರ ನಗೆ ಮೂಲ ಪ್ರವೃತ್ತಿಗಳ ವರ್ಗಕ್ಕೆ ಸೇರಿದ ವ್ಯಾಪಾರ. ಆದರೆ ಆತ್ಮ ಸಂರಕ್ಷಣೆ, ಆಹಾರಾನ್ವೇಷಣೆ, ಸಂತಾನ ಸಂಪಾದನೆ ಮೊದಲಾದ ಪ್ರವೃತ್ತಿಗಳಂತೆ ಪ್ರಮುಖವಾದುದಲ್ಲ. ಈ ಕಾರಣದಿಂದಲೇ ಅದಕ್ಕೆ ದೈಹಿಕವಾದ ಮುಖವೊಂದುಂಟು, ಅದಕ್ಕಿಂತ ಹೆಚ್ಚು ಮಾನಸಿಕವಾದುದು ಇನ್ನೊಂದು.

ದೈಹಿಕ ದೃಷ್ಟಿಯಿಂದ ನೋಡಿದರೆ ನಗೆಯ ಸಂದರ್ಭದಲ್ಲಿ ಏನಾಗುತ್ತದೆ ? ನಗುವು ಶಾರೀರಕ್ರಿಯೆ ಎಂಬುದು ಸ್ಪಷ್ಟವಷ್ಟೆ ? ನಕ್ಕಾಗ ಮುಖ ಹಿಗ್ಗುತ್ತವೆ, ಕೆಂಪಡರುತ್ತವೆ; ಕಣ್ಣು ಅರಳುತ್ತದೆ, ಹೊಳೆಯುತ್ತದೆ; ಮೂಗಿನ ಹೊಳ್ಳೆ ಉಬ್ಬುತ್ತದೆ. ಇಡೀ ದೇಹವೇ ಉತ್ತೇಜಿತವಾಗುತ್ತದೆ;ಹೊಸ ಹುರುಪು ಮೂಡುತ್ತದೆ. ಇಷ್ಟು ಸ್ಪಷ್ಟವಾಗಿ ಕಾಣಿಸದೆ ದೇಹದೊಳಗೇ ನಡೆಯುವ ವ್ಯಾಪಾರಗಳನ್ನೂ ವಿಜ್ಞಾನಿಗಳು ಗಮನಿಸಿದ್ದಾರೆ. ಉಸಿರಾಟದ ವೇಗಹೆಚ್ಚುತ್ತದೆ, ರಕ್ತಚಲನೆ ಇನ್ನಷ್ಟು ತೀವ್ರವಾಗಿ ನಡೆಯುತ್ತದೆ. ಇದರಿಂದಾಗಿ ರಕ್ತದ ಒತ್ತಡ ಸ್ವಲ್ಪ ಏರುತ್ತದೆ. ತಲೆಗೂ ಮುಖಕ್ಕೂ ರಕ್ತದ ಸರಬರಾಜು ಹೆಚ್ಚುತ್ತದೆ. "ಹೊಟ್ಟೆ ತುಂಬ" ನಕ್ಕರೆ ಮುಖ ಕೆಂಪಾಗುವುದು ಈ ಕಾರಣದಿಂದಲೇ, ಉಸಿರಾಟದಲ್ಲಿ ಹೆಚ್ಚು ಆಮ್ಲಜನಕವನ್ನು ಸೆಳೆದುಕೊಂಡು ಆಹಾರ ಪಚನೆ ಚೆನ್ನಾಗಿ ನಡೆಯುತ್ತದೆ. "ನಕ್ಕರೆ ಜೀರ್ಣ ಶಕ್ತಿ ಹೆಚ್ಚುತ್ತದೆ" ಎನ್ನುವ ಗಾದೆ ಕೆಲವು ದೇಶಗಳಲ್ಲಿ ಬಳಕೆಯಲ್ಲಿದೆ. "ನಕ್ಕು ದಪ್ಪನಾಗು" ಎನ್ನುವ ಇಂಗ್ಲೀಷ್ ಮಾತನ್ನು ಕೇಳಿದ್ದೀರಷ್ಟೆ ? ದಪ್ಪನಾಗುವುದೆಂದರೆ ಉಂಡದ್ದು ಅರಗಿ ಆರೋಗ್ಯ ಹೆಚ್ಚುವುದು. ಈ ಅಭಿಪ್ರಾಯಗಳಿಗೆ ದೈಹಿಕ ಸಮರ್ಥನೆಯಿಲ್ಲದೆ ಇಲ್ಲ.

ಮಾನಸಿಕ ದೃಷ್ಟಿಯಿಂದಲೂ ಕೆಲವು ವಿವರಗಳು ಸ್ಪಷ್ಟವಾಗಿವೆ. ಇವುಗಳಲ್ಲಿ ಮುಖ್ಯವಾದುದೆಂದರೆ ಬೇಸರ ಪರಿಹಾರ. ಯಾವುದಾದರೂ ಗುಂಗು ತಲೆಯಲ್ಲಿದ್ದು ಬಹಳ ಹೊತ್ತು ಅದರದೇ ಗೀಳಾದರೆ ಮನಸ್ಸಿಗೆ ಶ್ರಮವಾಗುತ್ತದೆ, ಬೇಸರವಾಗುತ್ತದೆ. ದೇಹ ಕೆಲಸಮಾಡಿ ದಣಿದಂತೆಯೇ ಮನಸ್ಸೂ ಕೆಲಸಮಾಡಿ ಆಯಾಸಗೊಳ್ಳುತ್ತದೆ. ದೇಹ ದಣಿದಾಗ ಕೈಕಾಲು ಚಾಚಿ ಮಲಗಿದರೆ, ಗಾಳಿ ಬೀಸಾಗಿ ಓಡಾಡಿದರೆ ದಣಿವು ಆರುತ್ತದೆ. ಮನಸ್ಸು ದಣಿದಾಗ ಏನು ಮಾಡಬೇಕು? ಈ ದಣಿವಿಗೆ ಪರಿಹಾರ ನಗೆ. ಒಂದೇ ಯೋಚನೆ ಮನಸ್ಸನ್ನು ಬೇಸರಿಸಿದ್ದಾಗ ನಗೆ ಈ ಯೋಚನೆಯನ್ನು ಚದುರಿಸಿ ಮನಸ್ಸಿಗೆ ಉಲ್ಲಾಸ ತರುತ್ತದೆ. ನಾವು ನಗುವಷ್ಟು ಕಾಲವೂ ಮನಸ್ಸಿಗೆ ಯೋಚನೆಯು ಸೋಂಕಿಲ್ಲ. ಇದೇ ಮನಸ್ಸಿಗೆ ವಿರಾಮ, ವಿಶ್ರಾಮ. ಈ ಕಾರಣದಿಂದಲೇ ನಾವು ನಕ್ಕ ನಂತರ ಹೊಸ ಹುರುಪು ಕಾಣಿಸಿಕೊಳ್ಳುತ್ತದೆ. ನಗೆ ಮನಸ್ಸಿಗೆ ಸ್ನಾನವಿದ್ದಂತೆ ; ನಕ್ಕರೆ ಲವಲವಿಕೆ, ಹರ್ಷ, ಉಲ್ಲಾಸ ಒದಗುತ್ತವೆ. ಆನಂತರ ಮತ್ತೆ ಮಾನಸಿಕ ಶ್ರಮವನ್ನು ವಹಿಸುವ ಮನೋವೃತ್ತಿಯೂ ಸಾಮರ್ಥ್ಯವೂ ಉಂಟಾಗುತ್ತವೆ.

ಹೀಗೆ ದೈಹಿಕ, ಮಾನಸಿಕ ಪ್ರಯೋಜನಗಳೆರಡೂ ಇರುವುದರಿಂದಲೇ ನಾವು ನಗೆಯನ್ನು ಅರಸಿಕೊಂಡು ಹೋಗುತ್ತೇವೆ. ಹಾಸ್ಯ ಸಂದರ್ಭಗಳನ್ನು ಎದುರು ನೋಡುತ್ತೇವೆ. ದಿನವೆಲ್ಲ ಕೆಲಸಮಾಡಿದ ಬೇಸರ ಹೋಗಲು ಸಂಜೆ ಹಾಸ್ಯ ಪುಸ್ತಕಗಳನ್ನೋ, ಹಾಸ್ಯ

ಚಿತ್ರಗಳನ್ನೂ ಆಶ್ರಯಿಸುತ್ತೇವಲ್ಲವೆ ? ಹೀಗೆ ಹಾಸ್ಯ ಸಂದರ್ಭಗಳನ್ನು ಬಯಸುವಾಗ ಅಸಂಗತ (absurd) ಹಾಸ್ಯಾಸ್ಪದ (ridiculous) ಮತ್ತು ವಿಭೀಷಿಕ (grotesque) ಎನಿಸಿಕೊಳ್ಳುವ ಸನ್ನಿವೇಶಗಳನ್ನೂ ಸಹಿಸುತ್ತೇವೆ. ಅಷ್ಟುಮಾತ್ರವಲ್ಲ, ಅವನ್ನು ಬೇಕೆಂದೇ ಬಯಸುತ್ತೇವೆ. ಹಾಸ್ಯರಸದಲ್ಲಿ ಇವು ಅವಶ್ಯವಾಗಿ ಸೇರಲೇಬೇಕೆಂಬ ನಿಯಮವಿಲ್ಲ; ಇವು ಯಾವುವೂ ಇರದ ತಿಳಿಹಾಸ್ಯ ಸಾಧ್ಯ; ಅದೇ ಮೇಲು ಮಟ್ಟದ ನಗೆಯೂ ಹೌದು. ಆದರೆ ಜನಗಳ 'ರುಚಿ', 'ಒಲವು', 'ಅಭ್ಯಾಸ' ಇವನ್ನಾಶ್ರಯಿಸಿ ನಗೆಗೆ ಹಲವಾರು ನೆಲೆಗಳಿವೆ, ನಗೆಯಲ್ಲಿ ಹಲವಾರು ಬಗೆಗಳಿವೆ.

ಮೆಕ್‌ಡೂಗಲ್ ೧೯೦೩ರಲ್ಲಿ (Nature) ಎನ್ನುವ ಪತ್ರಿಕೆಗೆ ನಗೆಯ ಬಗ್ಗೆ ಒಂದು ಪ್ರಬಂಧವನ್ನು ಬರೆದು ನಗೆಯ ಮೂಲ ಸಂತೋಷವಲ್ಲ ಎಂದು ಸಾಧಿಸಿದನು. ನಗೆಯನ್ನು ತರುವ ಸಂದರ್ಭಗಳೆಲ್ಲ ಸಾಮಾನ್ಯವಾಗಿ ಅಪ್ರಿಯವೇ, ದುಃಖಕರವೇ ; ನಗೆ ಬರದಿದ್ದರೆ ಅವುಗಳಿಂದ ನಮಗೆ ದುಗುಡ, ಬೇಸರ ದುಃಖ ಆಗುವುದು ಸಂಭವ. ಈ ವಾದವು ಉಳಿದ ವಾದಗಳ ವಿರುದ್ಧವಾಗಿದ್ದುದರಿಂದ ಒಂದು ಬಗೆಯ ಕ್ರಾಂತಿಯನ್ನು ತಂದಿತು. ಮೆಕ್‌ಡೂಗಲ್ ಪ್ರಕಾರ ಸ್ಮಿತ (smile) ಮತ್ತು ನಗೆ (laughter) ಎರಡೂ ಬೇರೆಬೇರೆ; ಸ್ಮಿತಕ್ಕೆ ಮೂಲವು ಸಂತೋಷ, ನಿಜ; ಆದರ ನಗೆ ಇದಕ್ಕಿಂತ ಬೇರೆಯಾದುದು. ನಗುವ ಪ್ರತಿಕ್ರಿಯೆ ಸಂತೋಷವೆಂದು ಭಾಸವಾದರೂ ಸಂದರ್ಭದಲ್ಲಿ ಸಂತೋಷವಿರುವುದಿಲ್ಲ ಎಂದು ಈತನು ವಾದಿಸಿದನು.

ಹಾಗಾದರೆ ನಗೆಯ ಪ್ರಯೋಜನವೇನು ? ನಗೆಯ ಕೆಲವು ಸಂದರ್ಭಗಳನ್ನು ವಿಮರ್ಶಿಸೋಣ. ಬೊಜ್ಜು ಹೊಟ್ಟೆಯ ಮನುಷ್ಯ ದಾರಿಯಲ್ಲಿ ನಡೆದು ಹೋಗುತ್ತ ಬಾಳೆಯ ಹಣ್ಣಿನ ಸಿಪ್ಪೆಯ ಮೇಲೆ ಜಾರಿ ಬಿದ್ದನೆನ್ನಿ ; ನೋಡುತ್ತಿದ್ದವರು ನಗುತ್ತಾರೆ. ಅಥವಾ ಗರ್ವದ ಮನುಷ್ಯನೊಬ್ಬ ಕಾಣದೆ ಬಾಳೆಯ ಹಣ್ಣಿನ ಮೇಲೆ ಕುಳಿತು ಬಿಟ್ಟನೆನ್ನಿ ; ಗಾಳಿಗೆ ಹಾರಿಹೋದ ತನ್ನ ಟೋಪಿಯ ಹಿಂದೆ ದಡೂತಿಯ ಆಸಾಮಿ ಓಡು ತ್ತಿದ್ದಾನೆನ್ನಿ. ಹೀಗೆಯೇ ಬಟ್ಟೆ ವಿಚಿತ್ರವಾಗಿದ್ದರೆ, ನಡಿಗೆ ಡೊಂಕಾಗಿದ್ದರೆ, ಮುಖ ವಿಕಾರವಾಗಿದ್ದರೆ, ಮಾತು ಸರಿಯಾಗಿರದಿದ್ದರೆ ನಗು ಬರುತ್ತದೆ. ಈ ಸಂದರ್ಭಗಳಲ್ಲಿ ಮೆಕ್‌ಡೂಗಲ್ ಹೇಳುವ ದುಗುಡ, ಬೇಸರ, ದುಃಖ ಎಲ್ಲಿದೆ ? ಇದು ಬೇರೆಯವರಿಗೆ ಒದಗಿದಾಗ ನಾವು ನಗುತ್ತೇವೆ. ಆದರೆ ನಮಗೆ ಒದಗಿದಾಗ ನಗು ಬರುವುದಿಲ್ಲವಷ್ಟೆ ? ಬೇರೆಯವರು ಕಷ್ಟದಲ್ಲಿದ್ದಾಗ ನಾವು ನಕ್ಕು ಸಂತೋಷಪಡುವುದು ಸಭ್ಯತನವೇ ? ಸಭ್ಯತೆಯಿರಲಿ, ಅದು ಸಹಜವೂ ಅಲ್ಲ ಎಂದು ಮೆಕ್‌ಡೂಗಲ್‌ವಾದ. ಮನುಷ್ಯರು ಮೇಲ್ತ ರದ ಸಸ್ತನಿವರ್ಗಕ್ಕೆ ಸೇರಿದ ಪ್ರಾಣಿಗಳು ; ಅವರಲ್ಲಿ ಪ್ರಾಚೀನವಾದ, ನಿಷ್ಕ್ರಿಯವಾದ ಅನುಕಂಪ (primitive passive sympathy) ಸಹಜವಾದ ಪ್ರವೃತ್ತಿ ; ಇದು ಸಂಘ ಜೀವನಕ್ಕೆ ಅಗತ್ಯವಾದುದು. ಸಮೂಹದಲ್ಲಿರುವ ಪ್ರಾಣಿ ಆತಂಕಕ್ಕೀಡಾದರೆ ಅದೇ ಸಮೂಹದ ಉಳಿದ ಪ್ರಾಣಿಗಳು ಅದರ ನೆರವಿಗೆ ಸಿದ್ಧ ವಾಗುತ್ತವೆ. ಕಾಡೆಮ್ಮೆಗಳ ಗುಂಪು ಕಾಡಿನಲ್ಲಿ ಮೇಯುತ್ತಿದ್ದಾಗ ಹುಲಿ ಒಂದು ಎಮ್ಮೆಯ ಮೇಲೆ

ಎರಗಿತೆನ್ನೋಣ. ಉಳಿದ ಎಮ್ಮೆಗಳು ಚೆಲ್ಲಾಪಿಲ್ಲಿಯಾಗಿ ಓಡಿಬಿಡುವುದಿಲ್ಲ. ಎಲ್ಲವೂ ಒಟ್ಟಿಗೆ ಹುಲಿಯ ಮೇಲೆಬಿದ್ದು ಅದನ್ನು ಅಟ್ಟಿಬಿಡುತ್ತವೆ. ಇದು ಕಾಡಿನಲ್ಲಿ ಮಾತ್ರ ನಡೆಯುವುದು ; ಊರು ಎಮ್ಮೆಗಳಲ್ಲಿ ಸಹಜಪ್ರವೃತ್ತಿ ಸ್ವಲ್ಪ ಕಡಮೆಯಾಗುವುದು ಸಹಜವೇ. ಗುಂಪಿನ ಎಮ್ಮೆಗಳಿಗೆ ತಾವು ಆತಂಕಕ್ಕೀಡಾದ ಎಮ್ಮೆಯ ನೆರವಿಗೆ ಹೋಗಬೇಕು, ಹೋಗುತ್ತಿದ್ದೇವೆ ಎನ್ನುವ ಅರಿವು ಇರುವುದಿಲ್ಲ. ಅವು ಹುಲಿಯನ್ನು ಓಡಿಸುವುದು ಸಂಕಲ್ಪದ ಫಲವಲ್ಲ ; ಅರಿವಿಗೆ ಒಂದು ಪ್ರವೃತ್ತಿ ಅದು. ಮೇಲ್ಮಟ್ಟದ ಸಸ್ತನಿ ಸಂಘಜೀವಿಗಳಲ್ಲಿ ಪ್ರತಿ ವ್ಯಕ್ತಿಯೂ ದುರ್ಬಲ ; ಸಮಷ್ಟಿಯಲ್ಲಿಯೇ ತ್ರಾಣ ಇರುವುದು. ಇಂಥ ಪ್ರಾಣಿಗಳು ಗುಂಪಿನಲ್ಲಿದ್ದಾಗಲೇ ಅವುಗಳಿಗೆ ನೆಮ್ಮದಿ. ಗುಂಪಿನಲ್ಲಿ ಪರಸ್ಪರ ಸಹಾಯ ಸಿದ್ಧವಾಗುವಂತೆ ಅನುಕಂಪ ಹಿನ್ನೆಲೆಯಲ್ಲಿರುತ್ತದೆ.

ಮನುಷ್ಯನಲ್ಲಿಯೂ ಈ ಅನುಕಂಪ ಇರುತ್ತದೆ. ನಮ್ಮ ವರ್ಗಕ್ಕೇ ಸೇರಿದ ಮನುಷ್ಯನೊಬ್ಬ ಬಿದ್ದನೆಂದರೆ, ಟೋಪಿಯನ್ನು ಅರಸುತ್ತ ಬವಣೆಪಟ್ಟನೆಂದರೆ, ಸರಿಯಾಗಿ ನಡೆಯಲಾರದವನಾದರೆ ಮಾತನಾಡಲಾರದವನಾದರೆ ನಮಗೆ ನಿಜವಾಗಿ 'ಅಯ್ಯೋ'! ಎನಿಸುತ್ತದೆ ; ಅವನಿಗೆ ಮರುಗುತ್ತೇವೆ, ಅವನ ದುಃಖದಲ್ಲಿ ಭಾಗಿಗಳಾಗುತ್ತೇವೆ. ಅವನ ನೆರವಿಗೆ ಹೋಗೋಣ ಎನಿಸುತ್ತದೆ. ಆದರೆ ನಮ್ಮ ನೆರವಿಗೆ ಸರಿಯಾದ ಸಂದರ್ಭ ಅಲ್ಲ ಅದು, ಬವಣೆ ಪಟ್ಟರೂ ಮನುಷ್ಯನಿಗೆ ಗಾಸಿಯಾಗುವುದಿಲ್ಲ. ಕಾಲು ಜಾರಿ ಬಿದ್ದವನಿಗೆ ನಾವು ನೋಡದೇ ಇದ್ದರೇ ಸಮಾಧಾನ ; ನಾಚಿಕೆಪಡಬೇಕಾದ ಅಗತ್ಯವಿರುವುದಿಲ್ಲ.

ನಾವು ನೋಡಿದುದೂ ಅಲ್ಲದೆ ಅವನ ನೆರವಿಗೂ ಹೋದೆವೆಂದರೆ ಅವನಿಗೆ ಸಿಟ್ಟೇ ಬಂದೀತು ! ಇಂಥ ಸಂದರ್ಭಗಳಲ್ಲಿ ನಮ್ಮ ಅನುಕಂಪ ನಿರರ್ಥಕವಾದುದು, ಅನಗತ್ಯವಾದುದು, ಅನಪೇಕ್ಷಿತವಾದುದು.

ಆದರೆ ಸಹಜವಾಗಿಯೇ ಉತ್ಪನ್ನವಾದ ಅನುಕಂಪವನ್ನು ಏನು ಮಾಡುವುದು ? ಅನುಕಂಪ ಮೂಡಿತೆಂದರೆ ಸಮರ್ಪಕವಾದ ಕೆಲಸವನ್ನು ಮಾಡಲು ಅದು ಸಿದ್ಧತೆಯೆಂದರ್ಥ ; ಅದಕ್ಕೆ ಅಗತ್ಯವಾದ ಊರ್ಜೆ ಆಗಲೇ ಹೊರಬಂದಿರುತ್ತದೆ. ಕೆಲಸಕ್ಕೆ ಅವಕಾಶ ಇಲ್ಲವಾದಾಗ ಈ ಊರ್ಜೆಯನ್ನು ವ್ಯಯಮಾಡುವುದು ಹೇಗೆ ? ಉತ್ಪನ್ನವಾದ ಊರ್ಜೆ ಹೊರಹರಿಯದಿದ್ದರೆ ಅದರಿಂದ ದೇಹಕ್ಕೆ ಆತಂಕ. ಹೀಗಿರುವಾಗ ನಗುವಿನಲ್ಲಿ ಊರ್ಜೆ ಪರ್ಯವಸಾನ ಹೊಂದುತ್ತದೆ. ನಕ್ಕನಂತರ ಅನುಕಂಪವಾಗಲೀ ಅದರಿಂದ ಬಂದ ಊರ್ಜೆಯಾಗಲೀ ಒಳಗೆ ಉಳಿಯುವುದಿಲ್ಲ. ಹೀಗಾದರೆ ದೇಹಕ್ಕೆ ಸೌಖ್ಯ. ಎಂದರೆ, ಈ ವಾದದ ಪ್ರಕಾರ ನಗುವಿನ ಹಿನ್ನೆಲೆ ಕಷ್ಟದ ಪರಿಸ್ಥಿತಿ ; ಅನುಕಂಪಕ್ಕೆ ಪ್ರತಿಕೂಲವಾಗಿ ಕೆಲಸ ಮಾಡುವುದೇ ನಗೆಯ ಪ್ರಯೋಜನ ಎಂದು ಮೆಕ್‌ಡೂಗಲ್ ವಾದ. ಕಾರ್ಲೈಲ್ ಒಮ್ಮೆ ಹೇಳಿದನಂತೆ—"ನಾನು ನಗುವುದೇಕೆ, ಗೊತ್ತೆ ? ಅಳಬಾರದೆಂದು !" ಎಂದು. ಮೇಲೆ ಹೇಳಿದ ವಿವರಣೆ ಈ ಅಭಿಪ್ರಾಯವನ್ನು ಸಮರ್ಥಿಸುತ್ತದೆ.

ಆದರೆ ಸಂದರ್ಭ ನಿಜವಾಗಿಯೂ ದುಃಖಕರವಾಗಿಬಿಟ್ಟರೆ ನಗೆ ಬಾರದು. ಕಾಲು ಜಾರಿ ಬಿದ್ದ ಮನುಷ್ಯ

ಕೈ ಮುರಿದುಕೊಂಡನೆನ್ನಿ ; ನಾವು ನಗುತ್ತೇವೆಯೆ ? ಒಡನೆಯೇ ಅವನ ನೆರವಿಗೆ ಹೋಗಿ ಅಗತ್ಯವಾದುದನ್ನು, ಸಾಧ್ಯವಾದುದನ್ನು ಮಾಡುತ್ತೇವೆ. ಇಲ್ಲಿ ಅನುಕಂಪವೂ ಸರಿಯೇ, ಅದರಿಂದ ಬಂದ ಊರ್ಜೆಯೂ ಸಾರ್ಥಕ ವಾಯಿತು. ನಗೆಗೆ ಎಲ್ಲಿಯ ಅವಕಾಶ ? ನಿತ್ಯ ಜೀವನ ದಲ್ಲಿ ದುರದೃಷ್ಟದ ಪ್ರಸಂಗಗಳು ನೂರಾರು ಬರುತ್ತವೆ. ಆದರೆ ಅವೆಲ್ಲ ನಮ್ಮ ಅನುಕಂಪಕ್ಕೆ ಅರ್ಹವಲ್ಲ. ಅವೆಲ್ಲಕ್ಕೂ ನಾವು ತಲೆಕೆಡಿಸಿಕೊಂಡರೆ ಬಾಳಿನುದ್ದಕ್ಕೂ ಅಳುತ್ತಲೇ ಇರಬೇಕು ! ಯಾವ ಪ್ರಸಂಗಗಳು ನಮ್ಮ ದುಃಖಕ್ಕೆ ಯೋಗ್ಯವಸ್ತುಗಳಲ್ಲವೋ ಅವು ನಗೆಯನ್ನು ತರುತ್ತವೆ ; ತರಬೇಕು, ಇಲ್ಲವಾದರೆ ಬದುಕು ದುರ್ಭರ ವಾದೀತು !

**ಜೀವನ ರಕ್ಷೆ**

ಇದೇ ವಾದಸರಣಿಯನ್ನೇ ಹಿಡಿದು ಡಾ॥ ಎಂ. ವಿ. ಗೋಪಾಲಸ್ವಾಮಿಯವರು (೧೮೮೬ – ೧೯೫೭) ಮತ್ತೊಂದು ವಾದವನ್ನು ಮುಂದಿಟ್ಟರು. ಗೋಪಾಲ ಸ್ವಾಮಿಯವರು ಮೈಸೂರು ವಿಶ್ವವಿದ್ಯಾನಿಲಯದ ಮಹಾರಾಜಾ ಕಾಲೇಜಿನಲ್ಲಿ ಮನಃಶಾಸ್ತ್ರ ವಿಭಾಗವನ್ನು ಆರಂಭ ಮಾಡಿದವರು ; ತಮ್ಮ ಸಂಶೋಧನೆಗಳಿಂದ ವಿಶ್ವವಿಖ್ಯಾತರಾದವರು ; ನನ್ನ ವಿದ್ಯಾ ಗುರುಗಳು ಮತ್ತು ಮೇಲಧಿಕಾರಿಗಳಾಗಿದ್ದವರು. ನಗೆಯ ಬಗ್ಗೆ ಇವರು ಹಲವಾರು ಸಂಶೋಧನೆಗಳನ್ನು ನಡೆಸಿ ನಗೆ ಒಂದು ಸಂರಕ್ಷಣೋಪಾಯ ಎನ್ನುವ ಸಿದ್ಧಾಂತಕ್ಕೆ ಬಂದರು. ಎಳೆಯ ಮಕ್ಕಳ ಮೇಲೆ ಇವರ ಅಧ್ಯಯನ ನಡೆಯಿತು. ಮಕ್ಕಳು ನಗುವ ಸಂದರ್ಭಗಳು ಯಾವುವು?

ದೊಡ್ಡ ಶಬ್ದವಾದರೆ, ಮೇಲೆ ಹಾರಿಸಿ ಹಿಡಿದುಕೊಂಡರೆ, ಅವಿತುಕೊಂಡಿದ್ದವರು ತಟ್ಟನೆ ಮುಂದೆ ಬಂದರೆ ಮಕ್ಕಳು ಗಟ್ಟಿಯಾಗಿ ನಗುವುದು ಎಲ್ಲರ ಅನುಭವ ದಲ್ಲಿಯೂ ಇದೆಯಷ್ಟೆ. ಸಮೀಪದಲ್ಲಿ ಶಬ್ದ, ಆಲಂಬನೆ ಯಿಲ್ಲದೆ ಮೇಲೆ ಹಾರುವುದು ಇಲ್ಲವೆ ಮಗುವಿನಲ್ಲಿ ಸಹಜವಾಗಿ ಭೀತಿಯನ್ನು ಹುಟ್ಟಿಸುತ್ತವೆ. ಭೀತಿಯೂ ಒಂದು ಭಾವ-ಉದ್ವೇಗವೇ; ದೈಹಿಕವಾಗಿ ಮುಂದಿನ ಕೆಲಸಕ್ಕೆ ಸಿದ್ಧತೆ. ಇದರಿಂದ ಊರ್ಜೆ ಹೊರಬರುತ್ತದೆ. ಈ ಸಂದರ್ಭದಲ್ಲಿ ಮಗುವಿನ ದೈಹಿಕ ಪ್ರತಿಕ್ರಿಯೆಗಳನ್ನು ಪರಿಶೀಲಿಸಿದರೆ, ಮಗು ಕಾತರವಾಗಿರುತ್ತದೆ, ಕೈಕಾಲು ಸೆಟೆದುಕೊಂಡಿರುತ್ತದೆ, ಮುಖದಲ್ಲಿ ಆತಂಕ ಸ್ಪಷ್ಟ ವಾಗುತ್ತದೆ. ಹೆದರಿಕೆಯಲ್ಲಿ ಯಾವ ದೈಹಿಕವಿಕಾರಗಳು ಇರುವುವೋ ಅವೆಲ್ಲವೂ ಇಲ್ಲಿರುತ್ತವೆ. ಆದರೆ ಭೀತಿಗೆ ಕಾರಣವಿಲ್ಲ ಎನ್ನುವುದು ಮಗುವಿಗೆ ಬೇಗನೇ ತಿಳಿಯು ತ್ತದೆ. ಶಬ್ದದಿಂದ ಅಪಾಯವಿರದು, ಮೇಲೆ ಹಾರಿ ದರೂ ಮತ್ತೆ ಹಿಡಿದುಕೊಳ್ಳುತ್ತಾರೆ, ಕಾಣದೆ ತಟ್ಟನೆ ಮುಂದೆ ಬರುವುದರಿಂದ ಆತಂಕವೇನೂ ಇಲ್ಲ, ಇದು ಆಟ ಅಷ್ಟೆ ಎನ್ನುವ ಅರಿವು ಮಗುವಿನಲ್ಲಿ ಮೂಡುತ್ತದೆ. ಆಗ ಹೆದರಿಕೆ ಜಾರುತ್ತದೆ, ಆಟದ ಗೀಳು ಮೂಡುತ್ತದೆ; ಮಗು ಅದನ್ನೇ ಮತ್ತೆ ಮತ್ತೆ ಬಯಸುತ್ತದೆ.

ಆದರೆ ಭೀತಿಯಿಂದ ಹೊರಬಂದ ಊರ್ಜೆಯ ಗತಿ ಏನು? ಭೀತಿಯ ಪ್ರವೃತ್ತಿ ಕೊನೆಗಾಣದೆ, ತನ್ನ ಉದ್ದೇಶವನ್ನು ಸಾಧಿಸದೆ ಮಧ್ಯದಲ್ಲಿಯೇ ನಿಂತು ಬಿಡುತ್ತದೆ; ಹೀಗೆ ಪ್ರವೃತ್ತಿಯ ಉಚ್ಛೇದವಾಗಿ ಬಿಟ್ಟಿತು. ಇದರಿಂದ ದಾರಿತಪ್ಪಿದ ಊರ್ಜೆಯು ಗಂಟು

ಕೆಟ್ಟ ದೇಹಕ್ಕೆ ತೊಂದರೆಮಾಡಬಲ್ಲುದು. ಹೀಗೆ ಆರಂಭವಾದ ಪ್ರವೃತ್ತಿಗೆ ಪ್ರತ್ಯವಾಯ ಒದಗಿದಾಗ ಊರ್ಜೆಯನ್ನು ನಾಜೂಕಾಗಿ ಹೊರದೂಡಿ ಶರೀರದ ಸೌಖ್ಯವನ್ನು ಕಾಪಾಡುವ ಸಾಧನವೇ ನಗೆ. ಮೂಲದಲ್ಲಿ ಯಾವುದಾದರೊಂದು ಪ್ರವೃತ್ತಿಯಿದ್ದು ಅದರ ಅಭಿವ್ಯಕ್ತಿ ಪೂರ್ಣವಾಗುವ ಮೊದಲೇ ನಿಂತು ಬಿಡುವುದು ನಗೆಯು ಸ್ವರೂಪ ಎಂದು ಗೋಪಾಲಸ್ವಾಮಿ ವಿವರಿಸಿದರು.

ಪ್ರವೃತ್ತಿಯಿಂದ ಒದಗಿದ ಪ್ರತೀಕ್ಷೆಯು ಭಂಗವಾಗುವುದು ಇಲ್ಲಿ ಮುಖ್ಯ ವಿವರ. ಆದರೆ ಈ ಪ್ರತೀಕ್ಷಾಭಂಗ ತೀವ್ರವಾಗಿರಬಾರದು; ತೀವ್ರವಾಗಿದ್ದರೆ ನಗೆ ಬರುವುದಿಲ್ಲ, ನಿರಾಶೆಯು ದುಃಖವೇ ಉಂಟಾಗುತ್ತದೆ. ನಮಗೆ ಆಯಾಸವಾದಾಗ, ಅಥವಾ ದೇಹದಲ್ಲಿ ಸೌಖ್ಯವಿಲ್ಲದಿದ್ದಾಗ ಪ್ರತೀಕ್ಷಾಭಂಗ ಅಲ್ಪವಾದರೂ ತೀವ್ರವಾದಂತೆಯೇ ತೋರುತ್ತದೆ; ಇಂಥ ಸಮಯದಲ್ಲಿಯೂ ನಗೆ ಬರುವುದು ಕಷ್ಟ. ಊರ್ಜೆ ನಗೆಯಲ್ಲಿ ಹರಿದು ಹೋಗುವ ಸಾಮರ್ಥ್ಯವು ದೇಹರಚನೆಯಲ್ಲಿರಬೇಕು; ಈ ಸೌಲಭ್ಯ ಕಡಮೆಯಾದರೂ ನಗೆ ಒದಗುವುದಿಲ್ಲ. ನಗೆಯೂ ಒಂದು ಸಂವಿಧಾನ; ಮನುಷ್ಯನು ಅದನ್ನು ತನ್ನ ಹಿತಕ್ಕೆ ಬಳಸಿಕೊಳ್ಳುತ್ತಾನೆ. ಈ ಸಂವಿಧಾನವನ್ನು ಮತ್ತೆ ಮತ್ತೆ ಬಳಸುತ್ತಿದ್ದರೆ ನಗೆಯು ಅಭಿವ್ಯಕ್ತಿಗೆ ಸೌಲಭ್ಯವಿರುತ್ತದೆ. ಬಳಸದೆ ಬಿಟ್ಟರೆ ನಗೆ ಮೂಡುವುದು ಕಷ್ಟವಾಗುತ್ತದೆ. ಈ ಅವಶ್ಯಕ ಪ್ರತಿಬಂಧಗಳನ್ನೂ ಗೋಪಾಲಸ್ವಾಮಿ ನಿರೂಪಿಸಿದರು.

ದುಃಖಕರವಾದ ಸಂದರ್ಭವನ್ನು ಆಟದಂತೆ ಅನುಭವಿಸಿದರೆ (unpleasant experiences playfully enjoyed) ಅದು ನಗೆಯಾಗುತ್ತದೆ ಎಂದು ಮ್ಯಾಕ್ಸ್ ಈಸ್ಟ್‌ಮನ್ ವಿವರಿಸಿದನು. ಮಗುವನ್ನು ನಗಿಸಬೇಕಾದರೆ ಮೊದಲು ನಾವೇ ನಕ್ಕು ಅನಂತರ ಭಯಾನಕವಾಗಿ ಮುಖವಿಕಾರ ಮಾಡಿ, ಮತ್ತೆ ನಕ್ಕರೆ ಮಗುವೂ ನಗುತ್ತದೆ. ಮುಖವಿಕಾರವನ್ನು ನೋಡಿ ಮೊದಲು ಅದು ಹೆದರಿ ಹಿಂಜರಿಯುತ್ತದೆ ; ಆದರೆ ಅದು ಆಟವೆಂದು ಕಂಡುಕೊಂಡೊಡನೆ ಮತ್ತೆ ಬಯಸುತ್ತದೆ. ಇಲ್ಲಿಯೂ ನಗೆಯ ಪೂರ್ವಭೂಮಿಯಾಗಿ ಪ್ರವೃತ್ತಿಯೊಂದು ಇರಬೇಕು ಎನ್ನುವವಾದವಿದೆ.

ಮೆಕ್‌ಡೂಗಲ್, ಗೋಪಾಲಸ್ವಾಮಿ, ಈಸ್ಟ್‌ಮನ್ ಮೊದಲಾದವರು ಹೇಳುವಂತೆ ಪ್ರವೃತ್ತಿಯೊಂದರ ಕೈವಾಡವೇ ನಗೆಯಲ್ಲಿ ಕಾಣದಿರಬಹುದು. ಪ್ರವೃತ್ತಿಗೆ ಸಹಜವಾದ ಪ್ರತೀಕ್ಷೆ ಮೂಡಿದರೆ ಸಾಕು ; ಪ್ರತೀಕ್ಷೆಯು ಅವಸರದಲ್ಲಿ ಒತ್ತಡ ತಲೆದೋರುತ್ತದೆ, ಇಡೀ ಬಾಳು ಬಿಗಿಯಾಗಿ ಸೆಟೆದುಕೊಂಡಿರುತ್ತದೆ. ಇಂಥ ಪರಿಸ್ಥಿತಿಯೂ ಹಾನಿಕರವೇ ಅಲ್ಲವೆ? ಅಪ್ರಿಯವೇ ಅಲ್ಲವೆ? ಇದನ್ನು ಹೋಗಲಾಡಿಸುವುದು ನಗೆಯ ಪ್ರಯೋಜನವೆಂದರೂ, ನಗೆ ದಿಟವಾಗಿ ಜೀವನರಕ್ಷೆಯೇ.

ನಗೆಗೆ ಮೂಲಕಾರಣವಾಗಿ ಇರುವ ವ್ಯಾಪಾರ ಸಂತೋಷವಲ್ಲ, ಅಸಮಾಧಾನವೇ ಎನ್ನುವ ವಾದಕ್ಕೆ ಹಲವು ಸಮರ್ಥನೆಗಳು ದೊರೆತಿವೆ. ಗ್ರೈಗ್ ಎನ್ನುವ ಮನೋವಿಜ್ಞಾನಿ ೧೯೨೩ರಲ್ಲಿ ಒಂದು ಗ್ರಂಥವನ್ನು ಬರೆದು ಅದರಲ್ಲಿ ನಗೆಯ ಮತ್ತು ಪ್ರಹಸನದ ತಾತ್ಪ

ರ್ಯವನ್ನು ನಿಶ್ಚಯಿಸಲೆತ್ನಿಸಿದ. ಅವನ ಪ್ರಕಾರ ಪ್ರೀತಿಯೆನ್ನುವ ಭಾವವ್ಯಾಪಾರವು ಮೊದಲಾಗಿ ಯಾವುದಾದರೂ ಕಾರಣದಿಂದ ಅದಕ್ಕೆ ಅಡ್ಡಿಯಾದರೆ, ಊರ್ಜೆಯು ಈ ಅಡ್ಡಿಯ ವಿರುದ್ಧ ಸೆಣಸಲು ಸಿದ್ಧವಾಗುತ್ತದೆ. ಆದರೆ ಅಡ್ಡಿಯು ಇದ್ದಕ್ಕಿದ್ದಂತೆ ಮರೆಯಾಗಿಬಿಟ್ಟರೆ ಕದನಸನ್ನದ್ಧವಾದ ಊರ್ಜೆ ಏನು ಮಾಡಬೇಕು ? ಕೆಲಸವಿಲ್ಲದ ಊರ್ಜೆ ದೇಹದಲ್ಲಿಯೇ ಉಳಿಯಲಾರದಷ್ಟೆ ? ಈ ಹೆಚ್ಚಿನ ಊರ್ಜೆ ನಗೆಯಲ್ಲಿ ಹೊರಹೊಮ್ಮುತ್ತದೆ.

ಅಸಮಾಧಾನವೇ ನಗೆಯ ಮೂಲದಲ್ಲಿದ್ದರೂ, ಈ ಅಸಮಾಧಾನ ಅನಪೇಕ್ಷಿತವಲ್ಲದಿದ್ದಾಗ ಒದಗುವ ಅನುತೋಷ (relief) ನಗೆಯ ಕಾರಣ ಎಂದು ಹೇಳಬಹುದು. ಭಾವ ವ್ಯಾಪಾರವೊಂದು ಪ್ರಸಕ್ತವಾಗಿದ್ದಾಗ ಅದಕ್ಕೆ ಅಂತರಾಯವೆಂಬಂತೆ ಪ್ರಸಂಗವೊಂದು ಜರುಗಿದರೆ ಮೊದಲ ಪ್ರತಿಕ್ರಿಯೆ ನಿರಾಶೆಯೋ, ಜಿಗುಪ್ಸೆಯೋ, ಕ್ರೋಧವೇ. ಆದರೆ ಅಂತರಾಯದಿಂದ ಅಪಾಯವೇನಿಲ್ಲ ಎಂದು ಕಂಡುಬಂದರೆ ಒತ್ತಡ ಇಳಿಯುತ್ತದೆ. ಆಗ ನಿರಾಶೆ, ಜಿಗುಪ್ಸೆ, ಕ್ರೋಧ ಇವು ಅನುತೋಷದಲ್ಲಿ ಮುಗಿಯುತ್ತದೆ. ಈ ಅನುತೋಷದಿಂದ ಒಂದು ಬಗೆಯ ಸಂತೋಷವೂ ಇದೆ. ಈ ಸಂತೋಷ ನೇರವಾದುದಲ್ಲ, ಬಳಸಿನದು ಎನ್ನುವುದು ನಿಜ. ಆದರೆ ನಗೆಯಲ್ಲಿ ಸಂತೋಷವೇ ಇರದು, ಅಸಮಾಧಾನವೇ ಅದರ ತಾತ್ಪರ್ಯ ಎನ್ನಲಾಗದು. ಅಭಿವ್ಯಕ್ತಿಯಲ್ಲಿ ನಗೆ ಸುಖಸ್ವರೂಪವೇ, ಫಲದಲ್ಲಿ ಹಿತಕಾರಿಯೇ. ಈ ಕಾರಣದಿಂದ ಬದುಕಿನಲ್ಲಿ ಅಹಿತವನ್ನು ಹೋಗಲಾಡಿಸಿ ನಗೆ ಹಿತವನ್ನು ತರುತ್ತದೆ ಎನ್ನಬಹುದು.

## ಒಳಗಿನ ವ್ಯಾಪಾರ

ಸಿಗ್ಮಂಡ್ ಫ್ರಾಯ್ಡ್ ವಿಶ್ವವಿಖ್ಯಾತನಾದ ಮನೋವಿಜ್ಞಾನಿ. ಅವನ ಮನೋವಿಶ್ಲೇಷಣ ಪದ್ಧತಿ ಆಧುನಿಕ ಯುಗದಲ್ಲಿ ಕ್ರಾಂತಿಯನ್ನೇ ಒದಗಿಸಿತು. ಮನುಷ್ಯನ ಚೇತನದ ಒಳಗಿನ ವಿವರಗಳನ್ನು ಹೊರ ತೆಗೆಯುವ ಹವ್ಯಾಸ ಮನೋವಿಶ್ಲೇಷಣಪದ್ಧತಿಯದು. ಕನಸುಗಳ ಬಗ್ಗೆ ಫ್ರಾಯ್ಡ್ ಆಳವಾಗಿ ಅಧ್ಯಯನ ಮಾಡಿದನಂತರ ೧೯೦೫ರಲ್ಲಿ ವಿನೋದ (wit)ದ ವಿಚಾರವಾಗಿ ಪ್ರಬಂಧವನ್ನು ಪ್ರಕಟಿಸಿದನು. ವಿನೋದದ ನೆಲೆಯೂ ಕನಸಿನ ನೆಲೆಯೂ ಸದೃಶವಾದುದು ಎಂದವನ ಸಿದ್ಧಾಂತ. ಹಾಸ್ಯದ ಒಂದು ಪ್ರಕಾರ ವಿನೋದವೆಂದು ಸಾಮಾನ್ಯವಾಗಿ ನಮ್ಮ ನಂಬಿಕೆಯುಂಟು. ಫ್ರಾಯ್ಡನ ಪ್ರಕಾರ ಅದೇ ಬೇರೆ ಪ್ರವೃತ್ತಿ. ಈ ಪ್ರವೃತ್ತಿಯೂ ತನ್ನ ಅಭಿವ್ಯಕ್ತಿಗೆ ಇಪ್ಪತ್ತು ನಿರ್ದಿಷ್ಟ ಸಂವಿಧಾನಗಳನ್ನು ಬಳಸಿಕೊಳ್ಳುವುದೆಂದು ಹೇಳಿ, ವಿನೋದದ ಬಗೆಯು ಈ ಸಂವಿಧಾನವನ್ನವಲಂಬಿಸಿರುವುದೆಂದೂ, ಬೇರೆಯವರಲ್ಲಿ ಸಂತೋಷವನ್ನುಂಟುಮಾಡುವುದೇ ಅದರ ಪ್ರಯೋಜನವೆಂದೂ ವಿವರಿಸಿದನು. ಈ ಸಂತೋಷವು ಚೈತಸಿಕ ಊರ್ಜೆಯ ಉಳಿತಾಯ (economy of psychic energy) ವೆಷ್ಟೋ ಅಷ್ಟಕ್ಕೆ ಸರಿಯಾಗಿರುವುದೆಂದು ಅವನ ಊಹೆ. ಮನಸ್ಸಿನಲ್ಲಿ ನಿಷಿದ್ಧವಾದುದನ್ನು ನಿಗ್ರಹಿಸಲು ಅಗತ್ಯವಾಗುವ ಚೈತಸಿಕ ಊರ್ಜೆ ನಗೆಯಲ್ಲಿ ಹೊರಹೊಮ್ಮುತ್ತದೆ.

ವಿನೋದವಾದ ಮಾತನ್ನು ಆಡುವವರು, ಕೇಳುವವರು ಇಬ್ಬರಲ್ಲಿಯೂ ಈ ಊರ್ಜೆ ನಿರ್ದಿಷ್ಟ

ಪ್ರಮಾಣದಲ್ಲಿ ವ್ಯಯವಾಗುತ್ತದೆ. ಇಬ್ಬರಲ್ಲಿಯೂ ಒಳಗಿನಿಂದ ಏಳುವ ಅಸಭ್ಯ ವಿವರಗಳನ್ನು ನಿಗ್ರಹಿಸು ವುದು ಅಗತ್ಯವಾದ ಕ್ರಿಯೆ. ಈ ನಿಗ್ರಹಕ್ಕೆ ಊರ್ಜೆ ವ್ಯಯವಾಗಬೇಕು. ಅಸಭ್ಯ, ಲೈಂಗಿಕ ಬಯಕೆಗಳು ನೇರವಾಗಿ ಬರದೆ ಮುಸುಕುಹಾಕಿಕೊಂಡು ಬರುವುದ ರಿಂದಲೂ, ಕೇಳುವವರಿಗೆ ಅದು ತಮ್ಮೊಳಗಿನಿಂದ ಬರದೆ ಹೊರಗಿನಿಂದ ಬರುವುದರಿಂದಲೂ ನಿಗ್ರಹದ ಕೆಲಸ ಸುಲಭವಾಗುತ್ತದೆ. ಅದಕ್ಕೆ ಬೇಕಾದ ಊರ್ಜೆ ಯಲ್ಲಿ ಉಳಿತಾಯವಾಗುತ್ತದೆ. ಹೀಗೆ ಚೈತಸಿಕ ಊರ್ಜೆಯಲ್ಲಿ ಉಳಿತಾಯವಾಗುವುದೇ ಸಂತೋಷಕ್ಕೆ ಕಾರಣ. ಅದೇ ವಿನೋದದಲ್ಲಿರುವ ಸ್ವಾರಸ್ಯ.

ವಿನೋದದ ಮೂಲವನ್ನು ಅರಸುತ್ತ ಫ್ರಾಯ್ಡ್ ಮಗುವಿನ ಬೆಳವಣಿಗೆಯಲ್ಲಿ ಇದನ್ನು ಕಂಡನು. ತಾಯಿಗೂ ಮಗುವಿಗೂ ಇರುವ ಸಂಬಂಧ ದೃಢ ವಾಗುವುದು ಮಗು ತಾಯಿಯ ಮೊಲೆಹಾಲನ್ನು ಕುಡಿಯುವಾಗ. ಎಳೆಯ ಮಗುವಿನ ಬಾಯಿಯಲ್ಲಿ ಇರುವ ಸಂಕೋಚಕ ಪೇಶಿ (sphincter muscles) ಗಳು ಮೊಲೆಯನ್ನು ಚೀಪುವಾಗ ಬಳಲುತ್ತವೆ. ಹೊಟ್ಟೆ ತುಂಬಿ ಮೊಲೆಯನ್ನು ಚೀಪುವುದು ನಿಂತಾಗ ಈ ಪೇಶಿ ಗಳು ವಿರಮಿಸುತ್ತವೆ, ವಿಶ್ರಮಿಸಿಕೊಳ್ಳುತ್ತವೆ, ಒತ್ತಡ ವಿಲ್ಲದೆ ಅರಳುತ್ತವೆ. ಈ ವಿಶ್ರಾಮ ಸ್ಥಿತಿಯೇ ಮಗು ವಿನ ಮುಖದಲ್ಲಿ ನಗೆಯಾಗಿ ಕಾಣುತ್ತದೆ. ಈ ವಿವರ ವನ್ನು ಇರಾಸ್ಮಸ್ ಡಾರ್ವಿನ್ ೧೭೯೪ರಷ್ಟು ಹಿಂದೆಯೇ ಸೂಚಿಸಿದ್ದನು. ಮಗು ಹಾಲು ಕುಡಿದು ಸಮಾಧಾನ ದಿಂದ, ವಿಶ್ರಾಮ ಸುಖವನ್ನು ಅನುಭವಿಸುತ್ತ, ನಿದ್ರೆ

ಮಾಡುವಾಗ ಅದರ ಮುಖದಲ್ಲಿರುವ ಮಂದ ಹಾಸವು ಮುಂದಿನ ಜೀವನದಲ್ಲಿ ಕಾಣಬರುವ ಲೈಂಗಿಕತೃಪ್ತಿಗೆ ಸದೃಶವಾದುದೆಂದು ಫ್ರಾಯ್ಡ್ ವಿವರಿಸಿದನು. ದೊಡ್ಡವರ ನಗೆಯಲ್ಲಿ ಒದಗುವ ಮುಖವಿಕಾರಗಳು ಮಗುವಿನ ಸಮಾಧಾನ ಅಭಿವ್ಯಕ್ತಿಯಿಂದಲೇ ಬೆಳೆದು ಬಂದವು ಎಂದು ಅವನ ವಾದ. ಶೈಶವ ಸುಖಾನುಭವವನ್ನೇ ಪ್ರಗಲ್ಭವಾದ ನಗೆಯಲ್ಲೂ ಫ್ರಾಯ್ಡ್ ಕಂಡಾಗ ಲೈಂಗಿಕ ಸಮಾಧಾನವೇ ಅವನ ಮನಸ್ಸಿನಲ್ಲಿದ್ದಿತು.

ಮಗು ಹೊಟ್ಟೆ ತುಂಬಿದ ತೃಪ್ತಿಯಿಂದ, ತಾಯಿಯ ಮೊಲೆಯಿಂದ ಬಾಯಿಯನ್ನು ಕಳಚಿ, ಮುಖದಲ್ಲಿ ಮಂದ ಹಾಸವನ್ನು ಮೂಡಿಸಿಕೊಂಡಾಗ ಅದೇನು ನಗೆಯಲ್ಲ, ತಾಯಿಗೆ ತನ್ನ ಸ್ಥಿತಿಯನ್ನು ತಿಳಿಯಪಡಿಸುವ ಕಾತುರವೂ ಅದರಲ್ಲಿರುವುದಿಲ್ಲ. ಸುಖದ ಅಭಿವ್ಯಕ್ತಿಯೂ ಅಲ್ಲ, ಸಮಾಧಾನದ ಸೂಚನೆಯೂ ಅಲ್ಲ. ಆದರೆ ಇದು ನಗೆಯೆಂದು ತಾಯಿ ತಿಳಿದು ತಾನು ನಗುತ್ತಾಳೆ. ತಾಯಿಯ ನಗುವು ತನ್ನ ಸಮಾಧಾನದ, ತೃಪ್ತಿಯ ಸಂಕೇತವೆಂದು ಮಗು ಕಲಿಯುತ್ತದೆ, ತಾನೂ ನಗುವುದನ್ನು ಕಲಿಯುತ್ತದೆ. ಮಗು ನಗುವನ್ನು ಸುಖ–ಸಮಾಧಾನಗಳನ್ನು ತೋರಿಸುವ ಸಾಧನವೆಂದು ಆಗಿನಿಂದ ಅರಿಯುವುದು, ಕಲಿಯುವುದು. ಹೀಗೆ ದೊಡ್ಡವರು ನಗುವಾಗ ಬಾಯಿ ತೆರೆದು, ಮುಖಪೇಶಿಗಳನ್ನು ಹಿಗ್ಗಿಸುತ್ತಾರಷ್ಟೆ. ಮೊಲೆ ಹಾಲು ಕುಡಿದ ಮಗು, ತನಗೆ ಇನ್ನು ಹಾಲು ಬೇಡ, ಹೊಟ್ಟೆ ತುಂಬಿತು ಎನ್ನುವುದನ್ನು ಸೂಚಿಸಲು ಹೀಗೆಯೇ ಬಾಯಿ ತೆರೆದು ಸಂಕೋಚಕಪೇಶಿಗಳನ್ನು ಆರ

ಳಿಸುತ್ತದೆಯಲ್ಲವೆ? ಈ ಸಾದೃಶ್ಯಕ್ಕೆ ಕಾರಣವೇನೆಂದರೆ ಎರಡರಲ್ಲಿಯೂ ಮೂಲಭೂತವಾದ ಪ್ರವೃತ್ತಿ ಒಂದೇ ಆಗಿರುವುದೇ. ದೊಡ್ಡವರು ಬೆಳೆದ ಮಕ್ಕಳು ಅಷ್ಟೇ ಅಲ್ಲವೆ? ("Men are but children of a larger growth" ಎಂದು ಜಾನ್ ಡ್ರೈಡನ್ ಹೇಳಿದುದು ವಾಸ್ತವವೇ.

ಮನೋವಿಶ್ಲೇಷಣ ಪದ್ಧತಿಯ ದೃಷ್ಟಿಯಿಂದ ಶೈಶವವು ಮೂಲಭೂತವಾದ, ಮುಖ್ಯವಾದ ಸಮಯ: ವ್ಯಕ್ತಿತ್ವದ ಬುನಾದಿ ಇಲ್ಲಿಯೇ ಸಿದ್ಧವಾಗುವುದು. ಎಳೆಯ ಮಗುವಿನಲ್ಲಿ ಹಾಲು ಚೀಪುವಾಗ ಒತ್ತಡದಲ್ಲಿದ್ದು ಹೊಟ್ಟೆ ತುಂಬಿದ ನಂತರ ವಿಶ್ರಾಮ ಪಡೆಯುವ ಮುಖ ಪೇಶಿಗಳೇ ನಗೆಯ ದೈಹಿಕವಿಕಾರಗಳು ; ಈ ದೈಹಿಕವಿಕಾರಗಳು ಒದಗುವಾಗ ಮಗು ಅನುಭವಿಸುವ ಸಮಾಧಾನ ಇವನ್ನು ಅವಲಂಬಿಸಿದುದೇ ಆದರೂ ಕಾಲಕ್ರಮದಲ್ಲಿ, ಸ್ವತಂತ್ರವೃತ್ತಿಯಾಗುತ್ತದೆ. ದೈಹಿಕ ವಿಕಾರವಿಲ್ಲದೆ ಸಮಾಧಾನವನ್ನು ಅನುಭವಿಸುವ ಸಾಮರ್ಥ್ಯ ವ್ಯಕ್ತಿಗೆ ದೊರೆಯುತ್ತದೆ. ಇದೇ ಮುಖ ದಲ್ಲಾಗಲೀ ಅಂಗ ಭಂಗಿಗಳಲ್ಲಾಗಲೀ ಕಾಣಬರದ ನಗೆ; ಒಳನಗೆ ಎನ್ನಬಹುದು. ಎಳೆಯ ಮಗುವಿಗಾಗಲೀ, ಬೆಳೆದ ಮಕ್ಕಳಿಗಾಗಲೀ ಈ ಸಾಮರ್ಥ್ಯ ಇರುವುದಿಲ್ಲ. ನಗೆ ಒಳಗೆ ಹುಟ್ಟಿದೊಡನೆಯೇ ಹೊರಗೆ ಕಾಣಿಸಿಕೊಳ್ಳು ವುದು. ಅವರಲ್ಲಿ ಸಹಜ ಪ್ರವೃತ್ತಿ, 'ಅನೈಚ್ಛಿಕ' ಕ್ರಿಯೆ. ನಗೆಯನ್ನು ಬಿಗಿಹಿಡಿಯುವುದು, ತಡೆಯುವುದು ಮಕ್ಕಳಿಗೆ ಸಾಧ್ಯವೇ ಇಲ್ಲ; ಸಂಸ್ಕೃತಿ ಸಾಕಷ್ಟಿರದ ದೊಡ್ಡವರಿಗೂ ಸಾಧ್ಯವಿಲ್ಲ. ನಗೆಯ ಅಭಿವ್ಯಕ್ತಿಯನ್ನು

ನಿರೋಧಿಸುವುದು ಬೆಳವಣಿಗೆಯ ಫಲವಾಗಿ ಮತ್ತು ಸಭ್ಯತೆಯ ಪ್ರಭಾವದಿಂದ ತಲೆದೋರುವ ವಿವರ. ಈ ನಿರೋಧ (repression) ಎನ್ನುವುದು ಅವರೋಧವಷ್ಟೆ (suppression) ; ಮೂಲಪ್ರವೃತ್ತಿ ಸಂಪೂರ್ಣವಾಗಿ ಮರೆಯಾಗುವುದಿಲ್ಲ. ಬೇರೊಂದು ರೂಪವನ್ನು, ಮುಖವಾಡವನ್ನು, ಧರಿಸಿ ಈ ಆಂತರಿಕ ಪ್ರವೃತ್ತಿ ಮೈದಳೆಯುತ್ತದೆ. ಮುಖವಾಡವೇನೋ ಎಲ್ಲರಿಗೂ ಸಮ್ಮತವಾದುದು, ಅದರಲ್ಲಿ ಅಸಭ್ಯ, ಅಶ್ಲೀಲ ಎನ್ನುವ ಅರ್ಥ ಕಡಮೆ. ಆದರೆ ನಗೆಯ ಉಗಮ ಲೈಂಗಿಕವಾದುದು, ಅದು ಕಾಮಪ್ರವೃತ್ತಿಯ ಒಂದು ಪ್ರಕಾರ ಎನ್ನುವುದು ಮನೋವಿಶ್ಲೇಷಣವಾದದ ನಿಲುವು.

ಹೀಗೆ ಕಾಮನೆಯೋ ಒಳಗಿನ ವ್ಯಾಪಾರವಾದುದ ರಿಂದ ನಗೆಗೆ ನಿತ್ಯಜೀವನದಲ್ಲಿ ಮಹತ್ವವಿದೆ ; ನಗೆ ಹಿತವಾದುದು ಪ್ರಿಯವಾದುದು ಎನ್ನುವ ಕಲ್ಪನೆ ಕಾಣಿಸಿಕೊಳ್ಳುತ್ತದೆ. ನಗಬೇಕೆಂಬ ಕಾತರ, ನಗಿಸ ಬೇಕೆಂಬ ಚಪಲ ನಮ್ಮಲ್ಲಿ ಬೇರೂರಿರುವುದು ಇದೇ ಕಾರಣದಿಂದ. ಆದರೆ ಇದಕ್ಕೆ ಮಾನಸಿಕವಾದ ಅಂಗಇಲ್ಲದೆ ಇಲ್ಲ. ಮಗು ತಾಯಿಯ ನಗೆಯನ್ನು 'ಸಮಾಧಾನ'ದ ಸಂಕೇತವೆಂದು ಅರ್ಥಮಾಡಿಕೊಳ್ಳುವ ವಿಚಾರ ಮೊದಲೇ ಬಂದಿತಷ್ಟೆ. ಇದು ಪ್ರಸಂಗದಲ್ಲಿ ತಾತ್ಪರ್ಯ ವನ್ನು ಗ್ರಹಿಸಿಕೊಳ್ಳುವ ಶಕ್ತಿಯನ್ನು ಆಶ್ರಯಿಸಿದ ಮಾನಸ ವ್ಯಾಪಾರ. ದೊಡ್ಡವರಲ್ಲಿ ಕೂಡ ಹಾಸ್ಯವನ್ನು ಅರ್ಥ ಮಾಡಿಕೊಳ್ಳುವ ಅಗತ್ಯ ಉಂಟು. "ಕಡೆಯಲ್ಲಿ ನಗುವಾತನೇ ಸರಿಯಾಗಿ ನಗುವವನು" (He who

laughs last laughs best) ಎನ್ನುವ ನಾಣ್ಣುಡಿ ಯನ್ನು ಕೇಳಿದ್ದೀರಷ್ಟೆ. ನಗುವವರು ಮೂರು ಬಾರಿ ನಗುತ್ತಾರಂತೆ. ಮೊದಲನೆಯ ಬಾರಿ ಹಾಸ್ಯದ ಮಾತನ್ನು ಕೇಳಿದೊಡನೆ ; ಎರಡನೆಯ ಬಾರಿ ಪಕ್ಕದಲ್ಲಿದ್ದವರು ನಕ್ಕುದನ್ನು ನೋಡಿ ; ಮೂರನೆಯ ಬಾರಿ ಹಾಸ್ಯದ ಮಾತನ್ನು ಅರ್ಥ ಮಾಡಿಕೊಂಡಾಗ. 'ಇದು ಹಾಸ್ಯದ ಸಂದರ್ಭ, ಇದರಲ್ಲಿ ನಾನೂ ಭಾಗಿಯಾಗಬೇಕು' ಎನ್ನುವ ಆಶೆ ಮೊದಲೇ ಕಾಣಿಸಿಕೊಳ್ಳುತ್ತದೆ, ಇದು ಮೂಲ ಕಾಮನೆಗೆ ಸಂಬಂಧಪಟ್ಟ ವಿವರ. ಸುತ್ತಮುತ್ತ ಇರುವವರು ನಕ್ಕಾಗ 'ನಾನೂ ಈ ಗೋಷ್ಠಿ ವ್ಯಾಪಾರ ದಲ್ಲಿ ಸೇರಬೇಕು' ಎನ್ನುವ ಸಾಂಘಿಕಪ್ರವೃತ್ತಿ ಕೆಲಸ ಮಾಡುತ್ತದೆ. ಅರ್ಥಮಾಡಿಕೊಂಡು ನಗುವುದು ಸಂದರ್ಭದ ಒಗಟನ್ನು ಬಿಡಿಸಿ, ಅದರಲ್ಲಿರುವ ಅಭಾಸ ವನ್ನು ಕಂಡುಕೊಂಡು, ಅದನ್ನು ನಗೆಯಲ್ಲಿ ಹೊರ ಹೊಮ್ಮಿಸಿದಾಗ.

ಇಲ್ಲಿ ಮಾನಸ ವ್ಯಾಪಾರದ ಪ್ರಯೋಜನವೇನು ? ಅಸಭ್ಯವೆನಿಸಿದ ಮೂಲಕಾಮನೆಗಳಿಗೂ ಸಭ್ಯ ಜೀವನದ ಪ್ರಕಾರಗಳಿಗೂ ಸಾಮರಸ್ಯವನ್ನುಂಟು ಮಾಡುವುದೇ ಇದರ ಪ್ರಯೋಜನ. ಹೀಗೆ ವಾಸ್ತವ ನೆಲೆಗೂ (reality principle) ಸುಖ ನೆಲೆಗೂ (pleasure principle) ಹೊಂದಾಣಿಕೆ ಒದಗುವುದೇ ನಗೆಯ ಅಂತರಾರ್ಥ, ನಗೆಯ ಸ್ವಾರಸ್ಯ. ಈ ಎರಡು ನೆಲೆಗಳಿಗೆ ವಿರೋಧ ವಿರುವುದು ಮಗುವಿನ ಅನುಭವದಲ್ಲಿ ಬಂದಾಗ, ಭಯ, ಆತಂಕ, ಉದ್ವೇಗ ಸಹಜವಾಗಿಯೇ ತಲೆದೋರುತ್ತವೆ. ಈ ಭಯವನ್ನು ಗೆಲ್ಲದೆ, ಉದ್ವೇಗವನ್ನು ನಿಗ್ರಹಿಸದೆ,

ಆತಂಕವನ್ನು ಹೊರದೂಡದೆ ಬೆಳವಣಿಗೆ ಸಾಧ್ಯವಿಲ್ಲ. ಎರಡೂ ನೆಲೆಗಳಿಗೆ ಸಮನ್ವಯ ಮಾಡುವುದು ಬದುಕಿನ ಪ್ರತಿಯೊಂದು ಘಟ್ಟದಲ್ಲಿಯೂ ನಡೆಯುವ ವ್ಯಾಪಾರ. ಮಗು ನಗೆಯ ಮೂಲಕ ಭಯವನ್ನು ಗೆಲ್ಲುತ್ತದೆ. ಹೆದರಿಕೆಯ ಸಂದರ್ಭಗಳು ಮಗುವಿಗೆ ಬಹಳ ಇರುವುದ ರಿಂದಲೇ ಮಕ್ಕಳು ನಗುವುದೂ ಹೆಚ್ಚು. ಪ್ರೌಢ ರಾಗುತ್ತಾ ಬಂದಾಗ ಭಯದ ಸಂದರ್ಭಗಳೂ ಕಡಿಮೆ ಯಾಗುತ್ತವೆ, ನಗುವೂ ಕಡಮೆಯಾಗುತ್ತದೆ. ಭಯ ಪಟ್ಟಾಗಲೂ ಸುಸಂಸ್ಕೃತರಾದ ಜನ ಅದನ್ನು ತೋರ್ಪಡಿಸುವುದಿಲ್ಲವಷ್ಟೆ; ಹಾಗೆಯೇ ನಗೆಯ ಮೇಲೂ ನಿಯಂತ್ರಣವನ್ನು ಹೇರುತ್ತಾರೆ. ಆದರೆ ನಗೆಯ ಸಂದರ್ಭವನ್ನು ವಿಶ್ಲೇಷಣ ಮಾಡಿದಾಗ ಅದರ ಒಳಗಿನ ವ್ಯಾಪಾರ ಭಯ, ಆತಂಕ, ಉದ್ವೇಗ ಎನ್ನುವುದು ಸ್ಪಷ್ಟವಾಗುತ್ತದೆ.

**ಸಮಾಜದ ನೆರವು**

ಮನುಷ್ಯರ ಸಮಾಜದಲ್ಲಿ ನಗೆಗೆ ವಿಶಿಷ್ಟವಾದ ಸ್ಥಾನವಿದೆ. ಗುಂಪಿನಲ್ಲಿದ್ದಾಗ ನಗುವುದು ಹೆಚ್ಚು ; ಒಂಟಿಯಾಗಿದ್ದಾಗ ನಗು ಕಡಮೆ. ನಗುಮುಖವೆಂದರೆ ನಾಲ್ಕು ಜನ ಒಪ್ಪುತ್ತಾರೆ ; ಅಳುಮೋರೆಯೆಂದರೆ ಯಾರೂ ಸಹಿಸರು. ನಕ್ಕು ನಗಿಸುವ ಜನ ಎಲ್ಲರಿಗೂ ಬೇಕಾದವರು, ಯಾರ ಗೋಳಂಕರೆಗೆ ಯಾರು ಓಗುಟ್ಟು ತ್ತಾರೆ? "ನೀನು ನಕ್ಕರೆ ಪ್ರಪಂಚವೇ ನಿನ್ನೊಂದಿಗೆ ನಗುತ್ತದೆ ; ಅತ್ತರೆ ನೀನೊಬ್ಬನೆ ಅಳುವೆ" ಎಂಬ ಅರ್ಥವಿರುವ ಇಂಗ್ಲೀಷ್ ಸುಭಾಷಿತವನ್ನು ಕೇಳಿದ್ದಿರಷ್ಟೆ. ನಗೆ ಸಾಂಕ್ರಾಮಿಕವಾದುದು ; ಅದರ ಜಾಲಕ್ಕೆ ಜನ

ಸಿಲುಕುವುದು ಸುಲಭ. ಹತ್ತಾರು ಮಂದಿ ಗೋಷ್ಠಿಯಲ್ಲಿದ್ದಾಗ ನಗೆಯ ಅಲೆಗಳ ಅಬ್ಬರ ಪ್ರಸಿದ್ಧವಾದುದಲ್ಲವೆ? ಹಾಸ್ಯದ ಮಾತು ಸಣ್ಣದೇ ಇರಲಿ, ನಗೆಗೇನು ಬರವಿಲ್ಲ! ಒಬ್ಬ ನಕ್ಕನೆಂದರೆ ಉಳಿದವರೂ ನಗತೊಡಗುತ್ತಾರೆ. ಅದೇ, ಒಬ್ಬನೇ ಓದುತ್ತ ಕುಳಿತು ಹಾಸ್ಯದ ಸಂದರ್ಭ ಬಂದಾಗ ನಗೆ ಬಂದರೂ ಗಟ್ಟಿಯಾಗಿ ನಗಲಾರ! ಸಂದರ್ಭದಲ್ಲಿ ಹಾಸ್ಯ ಎಷ್ಟು ಅಗತ್ಯವಾಗಿರಲಿ, ಅದನ್ನು ಅಡಗಿಸುವುದು ಎಷ್ಟು ಕಷ್ಟವಿರಲಿ, ಒಬ್ಬನೇ ನಗುವುದೆಂದರೆ ಅಳಕು; ಯಾರಾದರೂ ನೋಡಿದರೆ ಏನೆಂದುಕೊಂಡಾರು ಎಂದು ಅಂಜಿಕೆ. ಜೊತೆಗಾರರಿದ್ದರೆ ನಗಗೆ ನೆರವು.

ನಗೆಯೆಂದರೆ ಒಂದು ಸಂದರ್ಭದ ಅರಿವಾಯಿತು, ಈ ಸಂದರ್ಭದಲ್ಲಿ ಸಿಕ್ಕು ಪೇಚಾಡುವವರಿಗಿಂತ ತಾನು ಉತ್ತಮ ಎನ್ನುವ ಕಲ್ಪನೆ ನಗೆಯಲ್ಲಿ ಮುಖ್ಯವಿವರವೆಂದು ಕೆಲವು ವಿದ್ವಾಂಸರು ಸೂಚಿಸಿದ್ದಾರೆ. ಥಾಮಸ್ ಹಾಬ್ಸ್ (೧೫೮೮-೧೬೭೯) ಮನುಷ್ಯ ಸ್ವಭಾವವನ್ನು ಸಿಂಹಾವಲೋಕನ ಮಾಡುತ್ತ "ಬೇರೆಯವರ ಬವಣೆಯನ್ನು ನೋಡಿದಾಗ, ಅಥವಾ ಅದನ್ನು ಆಲೋಚಿಸಿದಾಗ ತಾನು ಎಷ್ಟೋವಾಸಿ, ಉತ್ತಮ ಎನ್ನುವ ಮಹಿಮೆಯ ಅರಿವು ತಟ್ಟನೆ ಮೂಡುವುದೇ ನಗೆ" (sudden glory arising from some sudden conception of some eminence in ourselves) ಎಂದು ಹೇಳಿದನು. ನಗುವವರೆಲ್ಲ ಪ್ರತಿಷ್ಠಿತರು, ಗೌರವಾನ್ವಿತರು; ಬೇರೆಯವರನ್ನು ನೋಡಿಯೋ, ಅವರ ಪರಿಸ್ಥಿತಿಯನ್ನು ಹಳಿದೇ, ನಗೆ ಮೂಡುವುದು ಎಂದಾ

ಯಿತು. ನಗೆಯಲ್ಲಿ ಹಿರಿಮೆಯ, ವೈಭವದ ಕಲ್ಪನೆಯಿದೆ; ತಾನು ಕಳಪೆ, ದುರ್ದೈವಿ ಎಂದು ನೈಚ್ಯಾನುಸಂಧಾನ ಮಾಡಿಕೊಂಡಾಗ ನಗೆ ಬರದು. ಇದು ಜಂಭದಂತಲ್ಲ. ಜಂಭವನ್ನು, ದುರಹಂಕಾರವನ್ನು ಯಾರೂ ಸಹಿಸುವುದಿಲ್ಲ. ತಾನು ಉತ್ತಮ ಎಂದು ಸೂಚಿಸುವ, ತೋರಿಸುವ ಬಯಕೆಯೇನೂ ನಗೆಯಲ್ಲಿ ಇರುವುದಿಲ್ಲ. ನಗೆಯಲ್ಲಿ ಇದು ಧ್ವನಿತವಾದರೂ ಅದರಿಂದ ಯಾರಿಗೂ ನೋವಾಗದು, ಅಳುಕಾಗದು. ಸಮಾಜ ಅನುಮೋದಿಸಿರುವ ಸಂವಿಧಾನವೇ ಇದು.

ನಗೆಯಲ್ಲಿ ತಾನು ಉತ್ತಮ, ಬೇರೆಯವರು ಕೀಳು ಎನ್ನುವ ದೃಷ್ಟಿಯಿರುವುದನ್ನು ಲೂಡೋವಿಚಿ ಎಂಬಾತ ಸಮರ್ಥಿಸಿ ನಗೆಯಲ್ಲಿ ಕ್ರೌರ್ಯವೇ ಅಂತರಾರ್ಥ ಎಂದು ವಾದಿಸಿದನು. ಪ್ರಾಣಿಗಳು ಸಿಟ್ಟಿಗೆದ್ದು ತಮ್ಮ ಹಗೆ ಹತ್ತಿರ ಬರದಂತೆ ಓಡಿಸಲು ಮೇಲಿನ ಹಲ್ಲುಗಳನ್ನು ತೋರಿಸುತ್ತವೆ, ಹಾಗೆಯೇ ನಗೆಯಲ್ಲಿಯೂ ಮೇಲಿನ ಹಲ್ಲುಗಳೇ ಕಾಣುತ್ತವೆ. ಅದೇ ಪ್ರಯೋಜನವೇ ನಗೆಯಲ್ಲಿ ಕೂಡಾ ಕಾಣಿಸುತ್ತದೆ. ಮನುಷ್ಯ ತನ್ನ ಸನ್ನಿವೇಶದೊಂದಿಗೆ ಉತ್ತಮ ಹೊಂದಾಣಿಕೆ (superior adaptation) ಮಾಡಿಕೊಳ್ಳುವುದೇ ನಗೆಯ ಮರ್ಮ ಎಂದಿವನ ವಾದ. ಕೆಲವು ನಗೆಯ ಸಂದರ್ಭಗಳಲ್ಲಿ ಇದು ನಿಜವೇ, ನಗೆಯಲ್ಲಿ ಅವಹೇಳನವೂ ಸೇರಿ ಬರುವುದುಂಟು (laughing at). ಆದರೆ ಎಲ್ಲ ನಗೆಗೂ ಇದೇ ತಾತ್ಪರ್ಯವಿದೆ ಎನ್ನಲಾಗದು.

ನಗೆಯಲ್ಲಿ ಅವಹೇಳನ ಅಡಗಿದಾಗಲೂ 'ಹಲ್ಲು ಕಡಿಯುವ' ಮನೋವೃತ್ತಿ ಇಲ್ಲದಿರಬಹುದು. ಅವ

ಹೇಳನ, ಅಗ್ರ್ರಧರ್ಷಣ (aggression) ನಗೆಯ ಮೂಲ ವೆಂದು ಹೆನ್ರಿಬರ್ಗ್‌ಸೊನ್ ಕೂಡ ಒಪ್ಪಿಕೊಳ್ಳುತ್ತಾನೆ. ಆದರೆ ಮೂಲದಲ್ಲಿ ಅಹಿತವಾದರೂ ಅದರ ಅಭಿವ್ಯಕ್ತಿ ಹಿತವೇ ಎಂದವನವಾದ (The bad is put to work for the good). ಈ ವಾದವನ್ನು ಸ್ವಲ್ಪ ಪರಾಮರ್ಶೆ ಮಾಡೋಣ. ನಗೆ ಸಾಂಘಿಕ ವ್ಯಾಪಾರ. ನಾಲ್ಕು ಮಂದಿ ಸೇರಿದ ಕಡೆ, ಕ್ಲಬ್, ಹೋಟೆಲ್, ಪಾರ್ಕ್‌ಗಳಲ್ಲಿ ನಗುವವರನ್ನು ನೋಡಿದ್ದೀರಷ್ಟೆ. ನೀವೂ ಆ ಗುಂಪಿ ನಲ್ಲಿದ್ದರೆ ನಗುತ್ತಿದ್ದೀರಿ. ಆದರೆ ನೀವು ಗುಂಪಿನಿಂದ ಹೊರಗಿರುವುದರಿಂದ, ದೂರ ಇರುವುದರಿಂದ ನಗಲು ಹಿಂಜರಿಯುತ್ತೀರಿ. ಅವರು ಹೇಳುವ ಹಾಸ್ಯದ ಕಥೆ ನೀವು ಕೇಳಿ, ನಗಬೇಕೆನಿಸಿದರೂ ನಗುವುದಿಲ್ಲ ಅಲ್ಲವೇ ? ಎಂದರೆ ಗುಂಪಿಗೆ ಸೇರಿದ್ದಾಗ ನಗು ನಿರಾತಂಕವಾಗಿ ಹೊರಬರುತ್ತದೆ. ಸಿನಿಮಾ ಥಿಯೇಟರ್ ತುಂಬಿದ್ದಾಗ ನಗೆ ಬರುವ ಹಾಗೆ ಜನ ಕಡಮೆ ಇದ್ದರೆ ಬರುತ್ತದೆಯೇ? ನಗೆ ಸಹಜವಾದರೂ, ಅದರಲ್ಲಿ ಸಮಾಜದಿಂದ ಪ್ರೇರಣೆ, ಸ್ಫೂರ್ತಿ, ಸಮರ್ಥನೆಗಳನ್ನು ಗಮನಿಸಬಹುದು. ನಗೆಗೆ ಸಮಾಜದ ಪಾಲುಗಾರಿಕೆ ಅನಿವಾರ್ಯ.

ನಾವು ಬದುಕುವುದು ಸಮಾಜದಲ್ಲೇ ತಾನೆ ? ಸಮಾಜದ ರೀತಿನೀತಿಗಳನ್ನು ಅರ್ಥಮಾಡಿಕೊಳ್ಳುವ, ಅವುಗಳಿಗೆ ಹೊಂದಿಕೊಳ್ಳುವ ಹೊಣೆ ನಮ್ಮಲ್ಲಿ ಪ್ರತಿ ಯೊಬ್ಬರ ಮೇಲೂ ಇದೆ. ಯಾವುದಾದರೂ ಸಂದರ್ಭ ಎದ್ದರೆ ಅದರ ಸಾಮಾಜಿಕ ಮೌಲ್ಯಗಳನ್ನು ಅಳೆದು ನೋಡುವ ಜಾಗೃತಿ, ಎಚ್ಚರ ನಮಗಿರಬೇಕು. ಅದರಲ್ಲಿನ ಸಾಮಾಜಿಕ ಮೌಲ್ಯಗಳು ಒಪ್ಪವಾಗಿರದಿದ್ದರೆ, ವಿಚಿತ್ರ

ವಾಗಿದ್ದರೆ, ಸಮ್ಮತವಲ್ಲದಿದ್ದರೆ ಅದನ್ನು ಒಡನೆಯೇ ಗಮನಿಸುವ ಸೌಲಭ್ಯ ನಮ್ಮ ಬುದ್ಧಿಗಿರಬೇಕು. ಅಷ್ಟೇ ಇಲ್ಲದೆ, ಸಂದರ್ಭಕ್ಕೆ ಸರಿಯಾಗಿ ಹೊಂದಿಕೊಳ್ಳಲು ಪ್ರತ್ಯಾಸ್ಥತೆ ಅಥವಾ ಎಳವು (elasticity) ಮುಖ್ಯ. ದೇಹವೂ ಮನಸ್ಸೂ ಬಿಗಿಯಾಗಿ ಸೆಟೆದುಕೊಂಡಿದ್ದರೆ ಹೊಂದಾಣಿಕೆ ಸಾಧ್ಯವಿಲ್ಲ. ಸಮಾಜ ಇದನ್ನು ಸಮ್ಮಾನಿಸುವುದಿಲ್ಲ. ಇದನ್ನು ಹೇಗಾದರೂ ಮಾರ್ಪಡಿಸಲು ಯತ್ನಿಸುತ್ತದೆ. ಯಾರಲ್ಲಾದರೂ ನಿಲುವು, ವರ್ತನೆ, ಮಾತು ಇವು ಹೀಗೆ ಯಾಂತ್ರಿಕವಾಗಿ, ದೃಢವಾಗಿ, ಅನಮ್ಯವಾಗಿಬಿಟ್ಟಾಗ ಸಮಾಜವು ತನ್ನ ಅಸಮಾಧಾನವನ್ನು ಸೂಚಿಸುತ್ತದೆ. ಇದೇ ನಗೆ.

ನಾಲ್ಕು ಮಂದಿ ನಮ್ಮನ್ನು ನೋಡಿ ನಕ್ಕಾಗ ನಮಗೆ ಸಾಕಷ್ಟು ಪರಿಜ್ಞಾನವಿದ್ದರೆ ನಮ್ಮನ್ನು ನಾವೇ ಪರೀಕ್ಷಿಸಿಕೊಳ್ಳುತ್ತೇವೆ. ನಮ್ಮ ನಡೆಯಲ್ಲಿ, ನುಡಿಯಲ್ಲಿ ಶೀಲದಲ್ಲಿ, ಶಿಸ್ತಿನಲ್ಲಿ ಏನಾದರೂ ದೋಷವಿದೆಯೋ ಎಂದು ತಿಳಿಯುವ ಯತ್ನ ಮಾಡುತ್ತೇವೆ. ನಮ್ಮ ಕಣ್ಣಿಗೆ ಕಾಣಿಸಿದ ತಪ್ಪನ್ನು ಒಡನೆಯೇ ತಿದ್ದಿಕೊಳ್ಳುತ್ತೇವೆ. ಸುತ್ತಲಿನ ಸಂದರ್ಭಕ್ಕೆ ನಾವು ಸರಿಯಾಗಿ ಹೊಂದಿಕೊಳ್ಳಬೇಕು ; ನಮ್ಮ ನಿಲುವು "ಅನನ್ಯಸಾಧಾರಣ"ವಾದರೆ, ವಿಚಿತ್ರವಾದರೆ, ಸಮಾಜವು ನಮ್ಮ ಕಡೆ ಬೊಟ್ಟು ತೋರಿಸಿ ಅವಹೇಳನ ಮಾಡಿ, ನಗುತ್ತದೆ. ಈ ನಗೆ ಒಂದು ಶಿಕ್ಷೆಯೋ, ನಮ್ಮನ್ನು ನಾವು ತಿದ್ದಿಕೊಳ್ಳಬೇಕೆಂಬ ಅಪ್ಪಣೆಯೋ (social corrective). ನಗೆಯು ಒಂದು ಬಗೆಯ ಸಾಮಾಜಿಕ ನಿಯಂತ್ರಣವೆನ್ನಬಹುದು.

ಮನುಷ್ಯರಲ್ಲಿಯೇ ಸಮಾಜವು ಪ್ರೌಢಾವಸ್ಥೆಯನ್ನು ಮುಟ್ಟಿರುವುದರಿಂದ, ನಗೆಯೂ ಮನುಷ್ಯರಲ್ಲಿಯೇ ಸ್ಪಷ್ಟವಾಗಿರುವುದು. ಸಮಾಜದ ಗೊತ್ತು ಗುರಿಗಳನ್ನು ಸಮಾಜದ ಎಲ್ಲ ಜೀವಿಗಳಿಗೂ ತಿಳಿಯಪಡಿಸುವ ಸಾಧನೆಗಳಲ್ಲಿ ನಗೆ ಒಂದು ಎಂದು ಹಲವಾರು ಪ್ರಾಚೀನ ಸಂಸ್ಕೃತಿಗಳನ್ನು ಅಧ್ಯಯನ ಮಾಡಿದವರು ಒಪ್ಪಿದ್ದಾರೆ. ನಗೆಯಲ್ಲಿ ಅನುಕಂಪ (sympathy) ದ ಪಾತ್ರವು ಪ್ರಧಾನವೆಂದು ತಾಮಸ್ ಕಾರ್ಲೈಲ್, ವೊಲ್ತೇರ್ ಮೊದಲಾದವರು ಹೇಳಿದುದು ಇದೇ ಅರ್ಥದಲ್ಲಿಯೇ. ನಮ್ಮ ಆದರ್ಶಕ್ಕೂ ಮುಂದೆ ಕಾಣುವ ವಾಸ್ತವಿಕತೆಗೂ ವಿರೋಧ ಒದಗಿ, ವಾಸ್ತವವಾದುದು ಇನ್ನಷ್ಟು ಸಂಸ್ಕೃತವಾಗಿ ಆದರ್ಶದ ನೆಲೆಗೇರಬಹುದು ಎಂದು ನಮಗನಿಸಿದರೆ ನಾವು ನಮ್ಮ ಅಸಮಾಧಾನವನ್ನೂ ಆಶಯವನ್ನೂ ನಗೆಯಲ್ಲಿ ಮೂಡಿಸುತ್ತೇವೆ. ಸಮಾಜದ ಹಿನ್ನೆಲೆಯಿರದಿದ್ದರೆ ನಗೆಗೆ ಅರ್ಥವೇ ಇರದು. ಕೆಲವು ವೃತ್ತಿಗಳ ಬಗ್ಗೆ ಇರುವ ಹಾಸ್ಯದ ಮಾತುಗಳು ಈ ಸಂದರ್ಭಕ್ಕೆ ಉದಾಹರಣೆಗಳು. ವೈದ್ಯರ ದುರಾಶೆ ಮತ್ತು ನಿರ್ಲಕ್ಷ್ಯ; ರಾಜಕಾರಣಿಗಳ ಕುಟಿಲತೆ ಮತ್ತು ಅಪ್ರಮಾಣಿಕತೆ; ಉಪಾಧ್ಯಾಯರ ಮರೆವು; ಚರಿತ್ರಕಾರರ ಅಸತ್ಯ, ಉತ್ಪ್ರೇಕ್ಷೆ; ವಿಮರ್ಶಕರ ಅಧಿಕಪ್ರಸಂಗಿತನ; ಕವಿ ಜನರ ಉನ್ಮಾದ ಇವುಗಳನ್ನು ಕುರಿತು ನೂರಾರು ವಿನೋದಗಳಿವೆಯಷ್ಟೆ; ತಂತಮ್ಮ ವೃತ್ತಿಗತವಾದ ಹೊಣೆಯನ್ನು ಸಮರ್ಪಕವಾಗಿ ನಿರ್ವಹಿಸದಿದ್ದರೆ ನಗೆಪಾಟಲಾಗುತ್ತಾರೆ.

ಹಾಗೆಯೇ ಸಮಾಜಕ್ಕೆ ಕಂಟಕರೆನಿಸಿದ ಕುಡುಕರು, ಹುಚ್ಚರು, ವ್ಯಭಿಚಾರಿಗಳು, ಜಗಳಗಂಟರು, ಕಳ್ಳರು ಇವರೆಲ್ಲರ ಬಗ್ಗೆ ಕೂಡ ವಿನೋದಗಳಿವೆ. ಅವರು ಸಮಾಜಕ್ಕೆ ಹಿತವರಲ್ಲ ಎಂದು ಸ್ಪಷ್ಟಪಡಿಸುವುದೇ ಈ ನಗೆ ಮಾತುಗಳ ಉದ್ದೇಶ. ಒಟ್ಟಿನಲ್ಲಿ ನಗೆಯನ್ನು ಸಮಾಜದ ಚೌಕಟ್ಟಿಗೆ ತಗುಲಿಸಿಯೇ ಬಳಸುತ್ತೇವೆ. ಅದರ ಹಸಿ ತಾಗಿ ಬುದ್ಧಿ ಕಲಿಯುವವರೂ ಇಲ್ಲದೆ ಇಲ್ಲ. ತೀರ ಹೆಚ್ಚಿನ ಪ್ರಮಾಣದ ಲೋಪ ದೋಷಗಳಿದ್ದರೆ ನಗೆಯಿಂದ ಪ್ರಯೋಜನವಿಲ್ಲ ; ಸಮಾಜವು ಬೇರೆ ನಿಯಂತ್ರಣ ಸಂವಿಧಾನಗಳನ್ನು ಬಳಸಬೇಕಾಗುತ್ತದೆ.

**ಸಂದರ್ಭ ಶುದ್ಧಿ**

ಯಾವ ವಿಚಾರವೇ ಇರಲಿ, ವಾದ ಏನೇ ಇರಲಿ, ಸಂದರ್ಭವಿಲ್ಲದೆ ನಗೆಯಿರದು ಎನ್ನುವುದಂತೂ ಎಲ್ಲರೂ ಒಪ್ಪಿರುವ ವಿವರ. ನಗೆ ತಾನಾಗಿ, ಹೊರಗಿನ ವಿವರದ ನೆರವಿಲ್ಲದೆ ತೋರಿಕೊಳ್ಳುವ ವರ್ತನೆಯಲ್ಲ. ನಗುವನ್ನು ತರಿಸುವ ಸಂದರ್ಭ ಸ್ಥೂಲವಾಗಿಯೋ ಸೂಕ್ಷ್ಮ ವಾಗಿಯೋ, ಭೌತಿಕವಾಗಿಯೋ ಮಾನಸಿಕವಾಗಿಯೋ ಇದ್ದೇ ಇರಬೇಕು. ದಾರಿಯಲ್ಲಿ ದಡದಡನೆ ನಡೆಯುತ್ತಿರುವ ದಡಿಯ ಬಾಳೆ ಹಣ್ಣಿನ ಸಿಪ್ಪೆಯ ಮೇಲೆ ಕಾಲು ಜಾರಿ ಬಿದ್ದನೆಂದರೆ ಮಕ್ಕಳೂ, ಕೆಲವರು ದೊಡ್ಡವರೂ ನಗುತ್ತಾರೆ. ಇನ್ನೊಬ್ಬ ಬೊಜ್ಜ ಗಾಳಿಗೆ ಹಾರಿಹೋಗುತ್ತಿರುವ ತನ್ನ ಟೋಪಿಯನ್ನು ಹಿಡಿದುಕೊಳ್ಳಲು ಓಡುತ್ತಿರುವುದನ್ನು ನೋಡಿದರೆ ನಗು ಬರುವುದಿಲ್ಲವೆ? ವಿದೂಷಕನ ಉಡಿಗೆ-ನಡಿಗೆ, ಮಾತು-ಕತೆ, ಅಂಕು-ಡೊಂಕು ಎಲ್ಲ ನಗೆಪಾಟಲೇ. ಸರ್ಕಸ್ಸಿನಲ್ಲಿ ಹಾಸ್ಯಗಾರ

ಓಡುವುದು, ಬೀಳುವುದು, ನೆಗೆಯುವುದು, ಅಣುಕು ವುದು, ಅವನ ಜಂಬ, ನಾಚಿಕೆ, ಮುನಿಸು, ಅಂಜಿಕೆ ಎಲ್ಲವೂ ಜನ ನಗಲೆಂದೇ.

ದೊಡ್ಡವರಿಗೆ, ಬುದ್ಧಿವಂತರಿಗೆ ನಗೆಯ ಸಂದರ್ಭ ಇಷ್ಟು ಸ್ಥೂಲವಾಗಿ ಭೌತಿಕವಾಗಿ ಇರಬೇಕಾದುದಿಲ್ಲ. ಆಡುವ ಮಾತಿನಲ್ಲಿ ಮೇಲಿನ ಅರ್ಥ, ಒಳಗಿನ ಅರ್ಥ ಇವು ಬೇರೆಯಾದರೂ ನಗೆಬರುತ್ತದೆ. ಸಂದರ್ಭ ವಾಸ್ತವ ವಾಗಿ ಕಣ್ಣು ಮುಂದೆ ಇರದಿದ್ದರೂ ಅದನ್ನು ಚಿತ್ರಿಸಿ ಕೊಂಡು, ಕಲ್ಪಿಸಿಕೊಂಡು ನಗುತ್ತೇವಲ್ಲವೆ? ಹಾಸ್ಯದ ಪುಸ್ತಕಗಳನ್ನು ಓದುವಾಗ, ಪ್ರಹಸನಗಳನ್ನು ನೋಡು ವಾಗ ಸಂದರ್ಭ ಧ್ವನಿತವಾಗುತ್ತದೆ ಅಷ್ಟೆ. ಬೆರಳು ತೋರಿಸಿದರೆ ಹಸ್ತ ನುಂಗುವುದು ನಮ್ಮ ಬುದ್ಧಿಶಕ್ತಿಯ ಬಲದಿಂದ.

ಸಂದರ್ಭ ವಾಸ್ತವವೋ, ಕಲ್ಪಿತವೋ, ಸಹಜವೋ ಕೃತ್ರಿಮವೋ ಅಂತೂ ನಗೆಸಂದರ್ಭವನ್ನೇ ಅವಲಂಬಿಸಿರು ತ್ತದೆ. ಆದರೆ ಸಂದರ್ಭ ಹೇಗಿದ್ದರೆ ನಗೆ ಬಂದೀತು? ಸಂದರ್ಭದಲ್ಲಿ ಅಸಾಂಗತ್ಯ ಇದ್ದರೆ ನಗೆ ಬರುವುದು ಸಾಧ್ಯ. ಪಟ್ಟಣದ ಒಬ್ಬಾತ ಹಳ್ಳಿಯ ತನ್ನ ಮಿತ್ರನಿಗೆ ಕಾಗದ ಬರೆದ; ಬರೆಯಬೇಕಾದುದನ್ನೆಲ್ಲ ಬರೆದು ಕಡೆ ಯಲ್ಲಿ ಹೀಗೆ ಒಕ್ಕಣಿಸಿದ—'ನಿನಗೆ ಈ ಕಾಗದ ಓದು ವುದು ಆಗದಿದ್ದರೆ ಮೂಲೆ ಮನೆ ರಂಗಪ್ಪನ ಕೈಲಿ ಓದಿಸಿ ತಿಳಿದುಕೋ'—ಎಂದು! ಇನ್ನೊಂದು ನಿದರ್ಶನ, ಒಮ್ಮೆ ಅವಳಿಜವಳಿ ಸೋದರರಲ್ಲಿ ಒಬ್ಬ ಸತ್ತುಹೋದ. ಉಳಿದ ಇನ್ನೊಬ್ಬನನ್ನು ಕೆಲವು ಕಾಲದ ಮೇಲೆ ಮಿತ್ರ

ನೊಬ್ಬ ಸಂಧಿಸಿ ಕೇಳಿದ–''ನಿಮ್ಮಲ್ಲಿ ಒಬ್ಬ ತೀರಿಕೊಂಡ ನೆಂದು ಕೇಳಿದೆ. ಯಾರು ನೀನೋ, ನಿನ್ನ ಸೋದರನೋ?" ಎಂದು!

ಸಂದರ್ಭದಲ್ಲಿ ಅಸಂಭಾವ್ಯತೆಯಿದ್ದರೂ ನಗೆಗೆ ಕಾರಣವಾಗುತ್ತದೆ. ಸೈನ್ಯಕ್ಕೆ ಸೇರಿದ್ದ ಒಬ್ಬ ಹುಡುಗ ಬಹುಕಾಲ ತನ್ನ ತಾಯಿಗೆ ಕಾಗದವನ್ನೇ ಬರೆಯದೆ ಅನಂತರ ಹೀಗೆ ಬರೆದನಂತೆ–''ನನಗೆ ತುಂಬ ಕೆಲಸ; ಬಿಡುವೇ ಇಲ್ಲ. ಈಗ ಈ ಕಾಗದ ಬರೆಯುತ್ತಿರುವಾಗಲೂ ಒಂದು ಕೈಲಿ ಬಂದೂಕ ಹಿಡಿದಿದ್ದೇನೆ, ಇನ್ನೊಂದರಲ್ಲಿ ಕತ್ತಿಯಿದೆ।'' ಹೀಗಿರುವಾಗ ಕಾಗದ ಬರೆದದ್ದಾದರೂ ಹೇಗೆ ?

ಸಂದರ್ಭದಲ್ಲಿ ವಿರೋಧಾಭಾಸ ಇದ್ದರೂ ನಗೆ ಪಾಟಲೇ. ತುಂಬ ಎತ್ತರ ಹೆಂಡತಿ, ತೀರಾ ಕುಳ್ಳ ಗಂಡ ದಾರಿಯಲ್ಲಿ ನಡೆದು ಹೋಗುತ್ತಿದ್ದರೆ ನಗೆ ಬಂದೀತು. ದಢೂತಿಯ ಆಸಾಮಿ ಜಾರಿ ಬಿದ್ದರೆ ನಗು ಬರುವುದಿಲ್ಲವೆ? ತುಂಬ ಗಂಭೀರವಾದ ಉಪನ್ಯಾಸ ನಡೆಯುತ್ತಿದ್ದಾಗ ಬೀದಿ ನಾಯಿಯೊಂದು ಒಳಗೆ ಬಂದರೆ ಅಥವಾ ಹೊರಗಡೆ ಕತ್ತೆಯೊಂದು ಕಿರುಚಿದರೆ ನಗೆಯು ನದಿಯೋ ಹರಿಯುತ್ತದೆಯಷ್ಟೆ? ಉದಾತ್ತವಾದುದೂ ಕ್ಷುದ್ರವಾದುದೂ ಪಕ್ಕಪಕ್ಕದಲ್ಲಿಯೇ ಇದ್ದರೆ ಅದು ನಗೆಯ ಮೂಲ (juxtaposition of the sublime and ridiculous) ಎಂದು ಒಂದು ವಾದವೇ ಇದೆ. ನಾಟಕಗಳಲ್ಲಿ ಹಾಸ್ಯ ಸಂದರ್ಭ ಒದಗಿದಾಗ ಅದನ್ನು ಗಮನಿಸಬಹುದು. ರಾಜನ ವಿರಹ, ವಿದೂಷಕನ ಹಸಿವೆ ಎರಡೂ ಒಂದೇ ವೇಳೆ ಸೇರುವುದು ಸಂಸ್ಕೃತ ನಾಟಕಗಳಲ್ಲಿ ಇಲ್ಲವೆ?

ಸಂದರ್ಭದಲ್ಲಿ ವೈಲಕ್ಷಣ್ಯ ಇಲ್ಲದಿದ್ದರೂ ನಗೆ ಬರುವುದು ಕಷ್ಟ. ನಿತ್ಯವೂ ನಡೆಯುವ ಪ್ರಸಂಗವಾದರೆ ಅದರ ಕಡೆ ಗಮನವೂ ಅಷ್ಟಾಗಿ ಹರಿಯುವುದಿಲ್ಲ. ಅದರಲ್ಲಿ ಔದಾಸೀನ್ಯವೂ ಸ್ವಲ್ಪ ಮಟ್ಟಿಗೆ ಮೂಡುತ್ತದೆ. ಸಂದರ್ಭ ವಿಲಕ್ಷಣವಾದುದಾದರೆ ಅದರ ಕಡೆ ನಮ್ಮ ಅವಧಾನ ತಟ್ಟನೆ ಒಲಿಯುತ್ತದೆ, ಅವಧಾನದ ಫಲವಾಗಿ ನಮ್ಮ ಇಂದ್ರಿಯಗಳು ಎಚ್ಚೆತ್ತು, ಸಂದರ್ಭದ ವಿಶೇಷವನ್ನು ತಿಳಿಯುವ ತವಕ ಮೂಡುತ್ತದೆ. ಆದರೆ ಸಂದರ್ಭದಲ್ಲಿ ಗಾಂಭೀರ್ಯವಾಗಲಿ ಸ್ವಾರಸ್ಯವಾಗಲಿ ಇಲ್ಲದೆ ನಮ್ಮ ಅವಧಾನವೂ ತವಕವೂ ನಿರರ್ಥಕವಾದುವು ಎಂದು ಕಂಡುಕೊಂಡಾಗ ನಗೆ ಬರುತ್ತದೆ. 'ನೆಗೆಗಡಲ' ಕಥೆಗಳು ಇಂಥವೇ.

ಸಂದರ್ಭದಲ್ಲಿ ಪ್ರತೀಕ್ಷೆಯಿದ್ದು ಅದು ನಿಷ್ಫಲವಾದಾಗ ಬರುವ ನಗೆಯೂ ಮೇಲಿನ ಜಾತಿಗೆ ಸೇರಿದುದೇ. ಹಾಸ್ಯದ ಕಥೆಗಳಲ್ಲಿ ಹೀಗೆಯೇ ಇರುತ್ತದೆ. ಏನಾಗುವುದೋ ಎಂದು ಕುತೂಹಲ ಕೆರಳಿದಾಗ "ಆದುದು ಏನೂ ಇಲ್ಲ" ಎನ್ನುವ ಅರಿವಾಗುವುದೇ ಇಲ್ಲಿ ಹಾಸ್ಯದ ಸ್ವಾರಸ್ಯ. ರಾಮಾಶ್ವಮೇಧದಲ್ಲಿ ಮನೋರಮೆ ಮುದ್ದಣನನ್ನು ಕಾಡಿ, ಬೇಡಿ ಕವಿಗಳಿಗೆ ಒಲಿದಿರುವ ಸಪ್ತಾಕ್ಷರಿ ಮಂತ್ರವನ್ನು ತಿಳಿಯುವ ತವಕ ಪಟ್ಟಾಗ ಮುದ್ದಣ ಗಂಭೀರವಾಗಿ, ನಿಧಾನವಾಗಿ ಅದನ್ನು ತಿಳಿಸಿದ—"ಭವತಿ ಭಿಕ್ಷಾಂ ದೇಹಿ"; ಆ ಸಂದರ್ಭದಲ್ಲಿ ಪ್ರತೀಕ್ಷೆಯಿರುವುದೇ ಹಾಸ್ಯಕ್ಕೆ ಕಾರಣವಾಗುತ್ತದೆ.

ಅಹಂಕಾರದ ವ್ಯಕ್ತಿಯೊಬ್ಬನ ಗರ್ವಭಂಗವಾದರೆ ಸಂದರ್ಭ ಸ್ವಾರಸ್ಯವಾಗುತ್ತದೆ. ಇಲ್ಲಿಯೂ ಅನಿರೀಕ್ಷಿತ

ವಾದ ಮಾತಿನ ಚಕಮಕಿ ಹಾಸ್ಯಕ್ಕೆ ಮೂಲವಾಗ ಬಹುದು ಇಸಡೊರ ಡಂಕನ್ ಎಂಬ ಸುಂದರಿ ಒಮ್ಮೆ ಸುಪ್ರಸಿದ್ಧ ಲೇಖಕನಾದ ಜರ್ನಾರ್ಡ್‌ಷಾನನ್ನು ಕೇಳಿದ ಳಂತೆ-"ನಾವಿಬ್ಬರೂ ಮದುವೆಯಾಗಿ, ನಮ್ಮಲ್ಲಿ ಹುಟ್ಟಿದ ಮಗುವಿಗೆ ನನ್ನ ರೂಪ, ನಿನ್ನ ಬುದ್ಧಿ ಶಕ್ತಿ ಇದ್ದರೆ ಹೇಗೆ ?" ಒಡನೆಯೇ ಷಾ ಕೇಳಿದನಂತೆ "ಅದು ಸರಿ, ಆದರೆ ಮಗುವಿಗೆ ನನ್ನ ರೂಪ, ನಿನ್ನ ಬುದ್ಧಿ ಶಕ್ತಿ ಬಂದು ಬಿಟ್ಟರೆ ಏನು ಗತಿ ?" ಮಾರ್ಕ್‌ಟ್ವೇನ್ ವಿಖ್ಯಾತ ನಾದ ಹಾಸ್ಯಗಾರ. ಆವನ ಪಕ್ಕದ ಮನೆಯಾತನಿಗೆ ಎಲ್ಲಿಲ್ಲದ ಜಂಬ; ಮಾರ್ಕ್‌ಟ್ವೇನ್ ಒಮ್ಮೆ ಆವನ ಮನೆಯಲ್ಲಿ ಒಂದು ಪುಸ್ತಕವನ್ನು ನೋಡಿ "ಇದನ್ನು ನಾನು ಓದಿ ಕೊಡಲಾ ?" ಎಂದು ಕೇಳಿದ. ಆದಕ್ಕೆ ಆತ "ಓಹೋ, ಆಗಬಹುದು. ಆದರೆ ನನ್ನ ಮನೆಯಲ್ಲೇ ಓದಬೇಕು!" ಎಂದನಂತೆ. ಟ್ವೇನ್ ಸುಮ್ಮನಾಗಿಬಿಟ್ಟ. ಕೆಲವು ದಿನಗಳ ನಂತರ ಪಕ್ಕದ ಮನೆಯಾತ ಟ್ವೇನನ ಬಳಿಯಿದ್ದ ತೋಟದ ಗುದ್ದಲಿ ಯನ್ನು ಬಳಸಬೇಕಾಯಿತು. ಟ್ವೇನನ ಬಳಿ ಬಂದು "ನಿಮ್ಮ ಗುದ್ದಲಿಯನ್ನು ಬಳಸಬೇಕು. ಎರವಲು ಕೊಡುತ್ತೀರಾ ?" ಎಂದು ಕೇಳಿದನು. ಟ್ವೇನನು "ಓಹೋ, ಅದಕ್ಕೇನು ? ಆದರೆ ನನ್ನ ತೋಟದಲ್ಲೇ ಬಳಸಬೇಕು" ಎಂದು ಹೇಳಿದನು!

ಹೀಗೆ ಹಾಸ್ಯದಲ್ಲಿ ಸಂದರ್ಭದ ಪಾತ್ರ ಹಿರಿದಾ ದುದು. ಸಂದರ್ಭವು ವಾಸ್ತವವಾಗಿರಬಹುದು ಅಥವಾ ಕಾಲ್ಪನಿಕವಾಗಿರಬಹುದು. ಅಂತೂ ಸಂದರ್ಭದಲ್ಲಿ ಹಿನ್ನೆಲೆಯಿರದಿದ್ದರೆ ಹಾಸ್ಯ ಸಿದ್ಧವಾಗುವುದಿಲ್ಲ. ಈ

ದೃಷ್ಟಿಯಿಂದ ನಗೆ ಪರಾವಲಂಬಿ (parasitical); ಆದಕ್ಕೆ ಸಂದರ್ಭಶುದ್ಧಿಯಿರಬೇಕು.

**ನಗೆಯ ವಿಕಾರಗಳು**

ಸಂದರ್ಭ ಸರಿಯಾಗಿರದಿದ್ದಾಗ ಸಾಮಾನ್ಯವಾಗಿ ನಗೆ ಬಾರದು. ಸಂದರ್ಭಶುದ್ಧಿಯಿಲ್ಲದೆ ನಗೆ ಬಂದರೆ ಅಥವಾ ಆ ಸಂದರ್ಭದ ಔಚಿತ್ಯವನ್ನು ಅತಿಕ್ರಮಿಸಿ ನಗೆ ಒದಗಿದರೆ ನಗೆಯ ವಿಕಾರ ಆದು ಎನ್ನಬಹುದು. ನಗೆ ಅತಿಯಾದಾಗ ಬಿಕ್ಕಳಿಕೆ, ವಾಂತಿ ಆಗುವ ವಿಚಾರ ಹಿಂದೆಯೇ ಬಂದಿತಷ್ಟೆ. ನಗೆ ಅತಿಯಾದಾಗ ತಲೆಯಲ್ಲಿ ರಕ್ತಸ್ರಾವವೂ ಆಗುವ ಸಂಭವವಿದೆ. ದೇಹಕ್ಕೆ ಹೀಗೆ ತೊಂದರೆಯೊದಗುವ ವಿಕಾರಗಳು ಕೆಲವಾದರೆ ಮಾನಸಿಕ ವರ್ಗದಲ್ಲಿ ಸೇರಿ ಬರುವ ವಿಕಾರಗಳು ಹಲವು. ಮಾನಸಿಕ ರೋಗವಿಲ್ಲದೆ ಕೆಲವು ಸಂದರ್ಭಗಳಲ್ಲಿ ನಗೆಯ ವಿಕಾರಗಳು ತಲೆದೋರುವುದುಂಟು. ಯಾವುದೋ ಕೆಲಸಕ್ಕೆ ಅರ್ಜಿ ಹಾಕಿ "ಇಂಟರ್‌ವ್ಯೂ"ಗೆ ಕರೆ ಕಳುಹಿಸಿದಾಗ ಹೋಗಿದ್ದೀರೆನ್ನಿ. ನಿಮ್ಮ ಸ್ವಭಾವ ಸ್ವಲ್ಪ ನಾಚಿಕೆಯದಾದರೆ, ನೀವು ಸುಮಾರು ಅಧೀರ ಪ್ರಕೃತಿಯವರಾದರೆ, ಈ ಸಂದರ್ಭದಲ್ಲಿ ನಿಮ್ಮನ್ನು ಪ್ರಶ್ನಿಸಿದಾಗ ತಟ್ಟನೆ ಉತ್ತರ ಹೊಳೆಯದಿದ್ದರೆ ನಗುತ್ತೀರಿ. ಈ ನಗೆಯ ಔಚಿತ್ಯವೇನು? ನಗುವಂಥ ಪ್ರಸಂಗ ಅಲ್ಲೇನೂ ಇರದಿದ್ದರೂ ನಗೆ ಮಾತ್ರ ಹೊರಹೊಮ್ಮುತ್ತದೆ. ಇದನ್ನು 'ನರದೌರ್ಬಲ್ಯದ ನಗೆ' (nervous laughter) ಎನ್ನುತ್ತಾರೆ.

ಮನಸ್ಸು ಇದ್ದಕ್ಕಿದ್ದಂತೆ 'ಖಾಲಿ'ಯಾದರೆ, ಹಗುರವಾದರೆ ಆ ಸ್ಥಳವನ್ನು ನಗೆ ತುಂಬುತ್ತದೆ. ಮೇಲಿನದು ಒಂದು ನಿದರ್ಶನವಾದರೆ ಮದ್ಯವನ್ನು ಕುಡಿದಾಗ ಸುಲಭವಾಗಿ ತೋರಿ ಬರುವ ನಗೆ ಇನ್ನೊಂದು. ಇಲ್ಲಿ ಹೆಂಡದ ಅಮಲಿನಲ್ಲಿ ಭಾವ ನಿಯಂತ್ರಣ ಕಷ್ಟವಾಗುತ್ತದೆ. ಎಚ್ಚರವಾಗಿದ್ದಾಗ ಸಣ್ಣ ಸಣ್ಣ ಕಾರಣಗಳಿಗೆಲ್ಲ ನಗೆ ಬರುವುದಿಲ್ಲ; ನಗುವ ಪ್ರವೃತ್ತಿಯಿದ್ದರೂ ಅದನ್ನು ನಿಗ್ರಹಿಸಿಕೊಳ್ಳುತ್ತೇವೆ; ನೋಡಿದವರು ಏನು ತಿಳಿದುಕೊಂಡಾರೋ ಎನ್ನುವ ಅಳುಕು ಇರುತ್ತದೆ; ಮದ್ಯ ಶರೀರದಲ್ಲಿದ್ದಾಗ ಈ ನಿಗ್ರಹದ ಅಗತ್ಯ ತೋರುವುದಿಲ್ಲ; ಬೇರೆಯವರು ಏನೆಂದುಕೊಂಡಾರೆಂಬ ಕಲ್ಪನೆ ಬರುವುದಿಲ್ಲ. ಹೀಗಾಗಿ ಕಾರಣವಿಲ್ಲದೆ ನಗುವುದು, ಸಂದರ್ಭದ ಔಚಿತ್ಯದ ಗೊಡವೆಯಿಲ್ಲದೆ ನಗುವುದು ಕಾಣಬರುತ್ತದೆ.

ಸಮಸ್ಥಿತಿಯಲ್ಲಿದ್ದಾಗ ನಗದೆ ಗಂಭೀರವಾಗಿರುವವರೂ ಮದ್ಯದ ಅಮಲಿನಲ್ಲಿ ನಗತೊಡಗುತ್ತಾರೆ; ಅದು ಇಳಿದೊಡನೆ ಅವರ ಗಾಂಭೀರ್ಯ ಹಿಂದಿರುಗುತ್ತದೆ. ಆದರೆ ಕೆಲವು ರೋಗದ ಸ್ಥಿತಿಗಳಲ್ಲಿ ಇದೇ ರೀತಿ ಆಯತಪ್ಪಿ, ಸಂದರ್ಭಶುದ್ಧಿಯಿಲ್ಲದೆ, ಔಚಿತ್ಯ ಜ್ಞಾನವಿಲ್ಲದೆ ನಗುವುದುಂಟು. ಉನ್ಮಾದದ ನಗೆ (hysterical laughter), ತಿ ಳಿ ಗೇ ಡಿ ನ ಗೆ (idiotic laughter) ಗೀಳಿನ ಅಟ್ಟಹಾಸ (maniacal laughter) ಇವು ನಿದರ್ಶನಗಳು. ಈ ರೋಗಗಳ ಮುಖ್ಯ ಲಕ್ಷಣವೆಂದರೆ ಒದಗಿದ ಭಾವವನ್ನು ನಿಗ್ರಹಿಸುವ ಸಾಮರ್ಥ್ಯವಿಲ್ಲದೆ ಹೋಗುವುದು : ಕಾರಣವಿದ್ದಷ್ಟೇ ನಗಬೇಕು.

ಹುಚ್ಚು ಹುಚ್ಚಾಗಿ ನಗಬಾರದು, ನಕ್ಕರೂ ಗಾಂಭೀರ್ಯ ಕೆಡಬಾರದು ಎನ್ನುವ ಪರಿಜ್ಞಾನ ಕಡಮೆಯಾಗಿ ಬಿಡುತ್ತದೆ. ಮನಸ್ಸಿನಲ್ಲಿ ಮೂಲಭೂತವಾದ ಆತಂಕವೋ ಸಂಘರ್ಷವೋ, ಉದ್ವೇಗವೋ ಇದ್ದು, ಅದು ವರ್ತನೆಯನ್ನು ವಿಕಾರಗೊಳಿಸುತ್ತಿದ್ದಾಗ ಅದರ ಫಲವಾಗಿ ನಗೆಯೂ ವಿಕೃತವಾಗುತ್ತದೆ.

"ವಿಲ್ಸನ್ ಕಾಯಿಲೆ" ಎನ್ನುವ ಸ್ಥಿತಿಯೊಂದಿದೆ. ಇದಕ್ಕೆ ಗುರಿಯಾದ ರೋಗಿಗಳ ದೇಹ ನಡುಗುತ್ತದೆ; ಮಾಂಸಖಂಡಗಳಲ್ಲಿ ಸ್ತಬ್ಧತೆ ಕಾಠಿನ್ಯಗಳು ಒದಗಿ ಅಂಗ ಚಲನೆ ಕಷ್ಟವಾಗುತ್ತದೆ; ಬಾಯಿಯಿಂದ ಜೊಲ್ಲು ಅತಿಯಾಗಿ ಸುರಿಯುತ್ತದೆ. ಈ ಕಾಯಿಲೆಯಲ್ಲಿ ಕಾರಣ ವಿಲ್ಲದೆ ನಗುವುದೂ ಅಳುವುದೂ ಹೆಚ್ಚು. ರೋಗಿಗಳು ಈಗ ನಗುತ್ತಿದ್ದು ಒಡನೆಯೆ ಅಳತೊಡಗುತ್ತಾರೆ; ನಗುತ್ತಿದ್ದರೆ ನಿಲ್ಲಿಸಲು ಅವರಿಗೆ ತಿಳಿಯುವುದಿಲ್ಲ. ಈ ರೋಗ ನವತಾರುಣ್ಯದ ಸಮಯದಲ್ಲಿ ಒದಗುವುದು ವಿಶೇಷ. ಮಕ್ಕಳಲ್ಲಾಗಲೀ ಪ್ರಗಲ್ಭರಲ್ಲಾಗಲೀ ಅಷ್ಟಾಗಿ ಕಾಣಿಸಿಕೊಳ್ಳುವುದಿಲ್ಲ; ಈ ರೋಗ ಕೆಲವೊಮ್ಮೆ ಆನುವಂಶಿಕವಾಗಿ ಸಂಕ್ರಾಂತವಾಗುವುದು ತಿಳಿದು ಬಂದಿದೆ.

ಹೀಗೆ ರೋಗವಿದ್ದಾಗ ಭಾವದ ಅಭಿವ್ಯಕ್ತಿ ಹತೋಟಿಯನ್ನು ಮೀರುತ್ತದೆ. ಸಂದರ್ಭದಲ್ಲಿ ಸ್ವಾರಸ್ಯ ವನ್ನು ಕಂಡಾಗ ನಮ್ಮ ಹಾಸ್ಯಪ್ರವೃತ್ತಿ ಹೊರಹೊಮ್ಮಿ ಆ ಸಂದರ್ಭದಕಡೆ ಹರಿಯುವುದು ಸಹಜ. ಸಂದರ್ಭ ದೊಡನೆಯಾಗಲೀ, ವಾಸ್ತವಿಕತೆಯೊಡನೆಯಾಗಲೀ

ಸಂಬಂಧ ಅಷ್ಟಾಗಿ ಇರದ "ಸ್ವರತ"ರಾದ ರೋಗಿಗಳೂ ನಕ್ಕಾಗ ಮಾನಸಿಕವಿಕಾರದಲ್ಲಿ ಶೈಶವ ಸಹಜವಾದ ತನ್ನ ಮಹಿಮೆಯ ಗೀಳು' (infantile megalomania) ಇರುವುದನ್ನೂ ಮನೋವಿಶ್ಲೇಷಣ ತಿಳಿಯಪಡಿಸಿದೆ. ಅಪಹಾಸ್ಯ, ಮಾರ್ಮಿಕವಾದ ಚುಚ್ಚುಮಾತು (irony) ಮೊದಲಾದವುಗಳಲ್ಲಂತೂ ಆಗ್ರಧರ್ಷಣ (aggression) ಇರುವುದಂ ಸ್ಪಷ್ಟವೇ ಅಲ್ಲವೆ ? ಬೇರೆ ಯವರಿಗೆ ನೋವನ್ನುಂಟುಮಾಡುವ ಕಾತರವಿರುವು ದೆಂದಲ್ಲ ; ತಮ್ಮನ್ನೇ ತಾವು ಹಿಂಸಿಸಿಕೊಳ್ಳುವ (masochism) ಗುಪ್ತ ಕಾಮನೆಯಂ ಇಂಥ ಸಂದರ್ಭಗಳಲ್ಲಿ ಗುರುತಿಸಬಹುದು. ತಾವು ಮಾಡಿದ ಯಾವುದೋ ಅಪರಾಧದ ನೆನಪು ಒಳಗೇ ಕಾಡುತ್ತಿದ್ದು ಹೊರಗಿನ ವಸ್ತುವಿನಲ್ಲೋ ವ್ಯಕ್ತಿಯಲ್ಲೋ ವಾಸ್ತವ ವಾಗಿ ಇರದ ವಿರೋಧವನ್ನು ಆರೋಪ ಮಾಡಿಕೊಂಡು ಸಣ್ಣದೇ ಆದ ಯಾವುದಾದರೂ ನಿಮಿತ್ತವನ್ನು ಅವ ಲಂಬಿಸಿ, ಸಹನೆಯಿಲ್ಲದೆ, ತಾನು ಕಡೆಯಲ್ಲಿ ಸೋಲುವೆ ನೆಂದೇ ನಿರೀಕ್ಷಿಸಿ, ಉಗ್ರತೆಯನ್ನು ಪ್ರಕಟಿಸಿ ನಗುವ ರುಗ್ಣತಂತ್ರಿಕೆಯ (neurotic) ನಗು ಪ್ರಸಿದ್ಧವಾದುದಂ. ಇದಂ ವಿಕಟ ಅಟ್ಟಹಾಸ ; ಇದರಲ್ಲಿ ಕ್ರೌರ್ಯವಿದ್ದೀತೇ ವಿನಾ ಶೌರ್ಯವಿರದು.

ಶೀಲ ದುರ್ಬಲವಾದಾಗಲೂ ಕಾರಣವಿಲ್ಲದೆ, ಮಿತಿಯಿಲ್ಲದೆ ನಗುವ ಹವ್ಯಾಸ ತಲೆದೋರುತ್ತದೆ. ನಗೆಯಲ್ಲಿ ಔಚಿತ್ಯವೂ ಗಾಂಭೀರ್ಯವೂ ತಪ್ಪುತ್ತವೆ. ಬುದ್ಧಿಶಕ್ತಿ ಸಾಕಷ್ಟು ಬೆಳೆಯದಿದ್ದಾಗಲೂ ಹೀಗೆಯೇ ಆಗುತ್ತದೆ. ಅರ್ಥವಿಲ್ಲದೆ, ಕಾರಣ ವಿಲ್ಲದೆ ನಗುವುದು ;

ನಗತೊಡಗಿದರೆ ಎಲ್ಲಿ ನಿಲ್ಲಿಸಬೇಕೆಂಬ ಅರಿವಿಲ್ಲದಿರುವುದು; ಸಂದರ್ಭದ ಔಚಿತ್ಯವನ್ನು ಗಮನಿಸದಿರುವುದು ; ಅಶ್ಲೀಲವಾದುದೆಲ್ಲ ಹಾಸ್ಯ ಎಂದು ಬಗೆಯುವುದು– ಇವೆಲ್ಲ ಬುದ್ಧಿಮಾಂದ್ಯದಿಂದ ಉಂಟಾಗತಕ್ಕವು. ಯಾವ ಸಂದರ್ಭ ಎಷ್ಟು ಪ್ರಮಾಣದಲ್ಲಿ ಹಾಸ್ಯಾಸ್ಪದ ಎನ್ನುವ ಪರಿಜ್ಞಾನವಾಗಲೀ ನಿಶ್ಚಯವಾಗಲೀ ಇಲ್ಲದೆ ನಗುವುದು ಮಕ್ಕಳಿಗೆ ಸಹಜವಾದದು. ಆದರೆ ಅವರು ಬೆಳೆದಂತೆ ನಗೆಯ ಮೇಲೆ ನಿಯಂತ್ರಣವನ್ನು ಪಡೆದುಕೊಳ್ಳುತ್ತಾರೆ. ಇದು ಬುದ್ಧಿಶಕ್ತಿಯ ಫಲ. ಬುದ್ಧಿಶಕ್ತಿ ಸಾಕಷ್ಟು ಇರದಿದ್ದರೆ ಮಾತಿನಲ್ಲೂ, ವ್ಯವಹಾರದಲ್ಲೂ ಪ್ರಮಾದ ಕಾಣುವಂತೆ ನಗೆಯಲ್ಲೂ ಕಾಣುತ್ತದೆ.

**ವಿವೇಚನೆಯ ಸಾಹಿತ್ಯ**

ಅಂತೂ ನಗೆ ಮನುಷ್ಯನಿಗೆ ವಿಶಿಷ್ಟವಾದ ವ್ಯವಹಾರವಾದರೂ ಅದರ ಮರ್ಮವನ್ನೂ, ನೆಲೆಯನ್ನೂ ಕಂಡಿತವಾಗಿ ಬಿಡಿಸುವುದಾಗಿಲ್ಲ. ಆದರೆ ಅದರ ಹಿನ್ನೆಲೆಯಲ್ಲಿರುವ ಮಾನಸಿಕ ವಿವರಗಳನ್ನೂ, ಅದರ ಅಭಿವ್ಯಕ್ತಿಯಲ್ಲಿರುವ ದೈಹಿಕವಿಕಾರಗಳನ್ನೂ ಅದರ ಸಾಮಾಜಿಕ ತಾತ್ಪರ್ಯಗಳನ್ನೂ ಸಾಧ್ಯವಾದ ಮಟ್ಟಿಗೆ ವಿವರಿಸಲು ಯತ್ನಿಸಿದ್ದಾರೆ. ಅಧ್ಯಯನ, ಸಂಶೋಧನೆ ಇನ್ನೂ ನಡೆಯುತ್ತಲೇ ಇದೆ.

ನಗೆಯ ಬಗ್ಗೆ ನಡೆದಿರುವ ವಿವೇಚನೆ ವಿಪುಲವಾಗಿದೆ. ಈ ಕೆಳಗೆ ಅದರ ಪ್ರಮುಖ ಸಾಹಿತ್ಯವನ್ನು ಕಾಣಿಸಿದೆ.

Plato : *Philebus*
Aristotle : *Poetics, Nicomachean Ethics, Rhetorica*
Thomas Hobbes : *On Human Nature, IX* (1650)
Rene Descartes : *Traite des Parsions* (1649)
L. Joubert : *Traite de Ris* (1579)
Joseph Addison : *The Spectator* ಸಂಚಿಕೆಗಳು (1700 ರ ಸುಮಾರು)
Baruch Spinoza : *Ethics* (1670)
David Hartley : *Observation of Men* (1749)
Marie-Joseph Chenier : *Epitre a Voltaire* (1780)
Immanuel Kant : *Critique of Pure Reason* (1781)
William Hazlitt : *The English Comic Writers* (1819)
Arthur Schopenhauer : *The World as Will and Idea* (1819)
G. K. Chesterton : *Orthodoxy*
Poinsinet de Sivry : "Traite des causes Physiques et Morales du Rire" (1779)
Theodore Lipps : *Betrage zur Aesthetic* (1898)
Leigh Hunt : *Table Talk* (1851)

## ಪ್ರಚಾರೋಪನ್ಯಾಸ ಮಾಲೆಯ ಕೆಲವು ಹೊತ್ತಿಗೆಗಳು

| | |
|---|---|
| ನಕ್ಷತ್ರ ಲೋಕ | ಜಿ. ಟಿ. ನಾರಾಯಣರ |
| ಹವಾನುಕೂಲನ ಮತ್ತು ಪ್ರಶೀತನ | ಕೆ. ವಿ. ಸುಬ್ಬರಾಯ |
| ಪಾನೀಯಗಳು | ಕೆ. ಎಸ್. ಲಕ್ಷ್ಮಣರಾ |
| ಚಂದ್ರಲೋಕ ಯಾತ್ರೆ | ಪಿ. ಎಸ್. ವೆಂಕಟಸ್ವಾ |
| ಬೆಳಕಿನ ಸ್ವರೂಪ | ಬಿ. ವಿ. ನಾರಾಯಣರ |
| ದೂರದರ್ಶನ | ಕೆ. ಶೇಷಾದ್ರಿ ಅಯ್ಯಂ |
| ಸೂಕ್ಷ್ಮದರ್ಶಕಗಳು ಮತ್ತು ದೂರದರ್ಶಕಗಳು | ಕೆ. ಶೇಷಾದ್ರಿ ಅಯ್ಯಂ |
| ಉಕ್ಕು : ತಯಾರಿಕೆ ಮತ್ತು ರಚನೆ | ಕೆ. ಆರ್. ಮೋಹನ್ |
| ನೀರಾವರಿ ಸಮಸ್ಯೆಗಳು | ಕೆ. ಎನ್. ಶಿವಶಂಕರರ |
| ಅಂತರ್ಜಲ | ಸಿ. ನಾಗಣ್ಣ |
| ಮಾನವ ನಿರ್ಮಿತ ಧಾತುಗಳು | ಎಸ್. ವೆಂಕಟೇಶಮೂ |
| ಕರ್ನಾಟಕ ಅಂತರ್ಜಲ ಸಂಪನ್ಮೂಲಾಭಿವೃದ್ಧಿ | ವೈ. ಲಿಂಗರಾಜು |
| ಮಾನವನ ಮೇಲೆ ಗ್ರಹಗಳ ಪ್ರಭಾವ ಉಂಟೆ ? | ಎನ್. ಕೆ. ನರಸಿಂಹಮ |
| ಅನುವಂಶೀಯತೆ ಮತ್ತು ವೈವಿಧ್ಯ | ಎಂ. ಎಸ್. ಎಸ್. ರಾ |
| ದ್ಯುತಿ ವಿದ್ಯುತ್ ಪರಿಣಾಮ | ಕೆ. ನಾಗರಾಜನ್ |
| ಮಾನವ ಮತ್ತು ಪಾಚಿಗಳು | ವಿ. ಎಸ್. ಯಲವಿಗಿ |
| ಕಪ್ಪು ರಂಧ್ರಗಳು | ವಿ. ಟಿ. ಎಸ್. ಶರ್ಮ |